# ದೇವ-ದಾನವರು.

(ಪಂಚಾಂಕ ವೈದಿಕ ಗದ್ಯ ನಾಟಕ)


ಲೇಖಕ ಹಾಗು ಪ್ರಕಾಶಕ:

ಶಂಕರರಾವ್ ಕುಲಕರ್ಣಿ, ನೂಲವಿ

ಮು|| ನೂಲವಿ ಪೊ|| ಅರ್ಳೀಕಟ್ಟಿ ಜಿ|| ಧಾರವಾಡ.



(೧ನೇ ಆವೃತ್ತಿ ೬೦೦ ಪ್ರತಿಗಳು.)

—[೦]—

೧೯೩೦

ಬೆಲೆ ೧೨ ಆಣೆ.

# ಮುನ್ನುಡಿ.

ಶ್ರೀಯುತ ಕುಲಕರಣಿ ಶಂಕರಚಾರ್ಯರು ರಚಿಸಿದ "ದೇವ ದಾನವರು'' ಎಂಬ ಭಾವಪ್ರಧಾನವಾದ ನಾಟಕವು ಕನ್ನಡ ವಾಙ್ಮಯು ದಲ್ಲಿ ಒಂದು ಹೊಸ ಸಾಮಗ್ರಿಯು. ಇದು ವೈದಿಕ ಕಥೆಗಳನ್ನು-ಪ್ರಾಚೀನತಮ-ಉಪಾಖ್ಯಾನಗಳನ್ನು-ಅವಲಂಬಿಸಿ ರಚಿಸಿದ ನಾಟಕವು. ಇದರ ಮುಖ್ಯ-ಇತಿವೃತ್ತವು (ಕಥಾನಕವು) ಇಂದ್ರನೆಂಬ ದೇವನಿಗೂ ವೃತ್ರನೆಂಬ ದಾನವನಿಗೂ ನಡೆದ ಯುದ್ಧವು.

ಈ ಸೃಷ್ಟಿಯೊಳಗಿನ ಅನೇಕ ಅದ್ಭುತ ಭೌತಿಕ ವ್ಯಾಪಾರಗಳನ್ನ ನುಲಕ್ಷಿಸಿ ಪ್ರಾಚೀನಾರ್ಯರು ಅವುಗಳಿಗೆ ದೇವತಾರೂಪಣವನ್ನು ಕಲ್ಪಿಸಿದರು. ಇಂದ್ರನು ಪರ್ಜನ್ಯದೇವತೆಯೆಂದೂ, ವೃತ್ರನು ಮೇಘರೂಪನೆಂದೂ, ವಿದ್ಯುಚ್ಛಕ್ತಿ ದಧೀಚಿ ಋಷಿಯ ಅಸ್ಥಿ-ಇಂದ್ರನ ವಜ್ರಾಯುಧ-ಎಂದೂ, ಇಂದ್ರನು ವೃತ್ರನನ್ನು ಭೇದಿಸುವದೆಂದರೆ ಕೋಲ್ಮಿಂಚಿನಿಂದ ಕಾರ್ಮೋಡವನ್ನು ಭೇದಿಸಿ ಮಳೆದರುವುದೆಂದೂ ಕೆಲವರು ಹೇಳುವರು. ಈ ರೂಪಣಕ್ಕಿಂತ ಇಂದ್ರನು ಪ್ರಕಾಶಾಭಿಮಾನಿ ದೇವತೆಯೆಂದೂ, ವೃತ್ರನೆಂದರೆ ಅಂಧಕಾರಾಭಿಮಾನಿಯೆಂದೂ, ಇಂದ್ರ-ವೃತ್ರರ ಯುದ್ಧವೆಂದರೆ ತಮಃ-ಪ್ರಕಾಶಗಳ ಹೋರಾಟವೆಂದೂ ಹೇಳುವದು ಹೆಚ್ಚಿಗೆ ಯೋಗ್ಯವಾದುದು. ಇಂದ್ರನು ಪ್ರಕಾಶದೇವತೆಯೆಂಬುದು ಋಗ್ವೇದದಲ್ಲಿ ಹಲವೆಡೆ ಹೇಳಿದೆ. *

ನಾವು ನೋಡುವ ಪ್ರಾತ್ಯಾಹಿಕವಾದ ಈ ಅಹೋರಾತ್ರಗಳ-ಅಂ

---

* ಇಂದ್ರನು ಜ್ಯೋತಿಯನ್ನು ಸಂಪಾದಿಸಿದನು. (೩-೩೪-೪) ಅಂಧತಮದಲ್ಲಿ ಪ್ರಕಾಶವನ್ನು ಪಡೆದನು (೧-೧೦೦-೮) ಸೂರ್ಯನನ್ನೂ ಉಷೆಯನ್ನೂ ಉಂಟು ಮಾಡಿದ ಇಂದ್ರನು (೨-೧೨-೭) ಸೂರ್ಯನಿಗೆ ದಾರಿಯನ್ನು ಮಾಡಿಕೊಟ್ಟವನು. (೧೦-೧೧೧-೩) ಮುಂ.

ಧಕಾರ ಪ್ರಕಾಶಗಳ-ಯುದ್ಧವನ್ನೇ ಇಂದ್ರ-ವೃತ್ರರ ಕಾಳಗವನ್ನಾಗಿ ಕಲ್ಪಿಸಿರುವರೆಂದು ಕೆಲವರು ಹೇಳುವರಾದರೂ ಇದು ಪ್ರಾಚೀನಾರ್ಯರು ಧ್ರುವಸ್ಥಾನದಲ್ಲಿರುವಾಗಳಿನ ದೀರ್ಘಕಾಲಿಕವಾದ ಇರುಳಿಗೂ, ಅದರ ಕೊನೆಯಲ್ಲಿ ಬರುವ ಹಗಲಿಗೂ ನಡೆದ ಯುದ್ಧವೆಂದು ರೂಪಿಸುವುದು ಹೆಚ್ಚಿಗೆ ಯೋಗ್ಯವಾದುದು ಈ ನಾಟಕದಲ್ಲಿ ಈ ಧ್ರುವಸ್ಥಾನೀಯ ದೀರ್ಘಕಾಲೀನ ತಮಸ್ಸಿಗೂ, ಪ್ರಭಾತಕಾಲೀನ ಪ್ರಕಾಶಕ್ಕೂ ನಡೆದ ಯುದ್ಧವೇ ಅನುಲಕ್ಷಿಸಲ್ಪಟ್ಟಿರುವುದು. ಉತ್ತರಧ್ರುವಪ್ರದೇಶದಲ್ಲಿ ನಮ್ಮಲ್ಲಿಯಂತೆ(ವಿಷುವವೃತ್ತದ ಸಮೀಪದ ಇಲ್ಲವೆ ಸಮಶೀತೋಷ್ಣ ವಲಯದ ಪ್ರದೇಶದಂತೆ) ಹಗಲಿರುಳುಗಳು ಸಾಧಾರಣ ಸಮಾನಾವಧಿಕಗಳಾಗಿರುವುದಿಲ್ಲ. ಋಗ್ವೇದದಲ್ಲಿ ಹತ್ತು ತಿಂಗಳ ಅವಧಿಯ ದೀರ್ಘಕಾಲೀನವಾದ ಹಗಲೂ, ಎರಡು ತಿಂಗಳ ಅವಧಿಯ ದೀರ್ಘಕಾಲಿಕವಾದ ಇರುಳೂ ಉಲ್ಲಿಖಿತವಾಗಿವೆ. ಅಲ್ಲಿ ಈ ದೊಡ್ಡ ಅಸಹ್ಯವಾದ ಇರುಳಿನ ತರುವಾಯ ಬರುವ ಹಗಲು ಸುಖಕರವಾಗುವುದೆಂಬುದು ಸ್ವಾಭಾವಿಕವು. ಧ್ರುವಸ್ಥಾನದಲ್ಲಿ ಕೂಡ ಪ್ರದೇಶಭೇದದಿಂದ ಇರುಳಿನ ಅವಧಿಯು ಹೆಚ್ಚು ಕಡಿಮೆ ಇರಬಹುದಾದರೂ ಅದು ಅಸಹ್ಯವಾಗುವಷ್ಟು ದೀರ್ಘವಾಗಿತ್ತೆಂಬುದು ನಿಸ್ಸಂಶಯವಾದುದು. ಆ ದೀರ್ಘಾವಧಿಯಾದ ಇರುಳಿಗೆ-ಕತ್ತಲೆಗೆ-ಬೇಸತ್ತ ಆರ್ಯರು ಹಗಲನ್ನು-ಪ್ರಕಾಶವನ್ನು-ನಿರೀಕ್ಷಿಸುತ್ತ ಇರುವರೆಂಬುದು ಸಹಜವು. ಆದುದರಿಂದ ಅವರಿಗೆ ಪ್ರಭಾತವು-ಉಷೆಯು ಅತ್ಯಂತ ಪ್ರಿಯವಾಗಿದ್ದಿತು ಧ್ರುವಪ್ರದೇಶದ ಉಷೆಯು ನಮ್ಮ ಉಷೆಯಂತೆ ೨|೩ ಗಳಿಗೆ ಅವಧಿಯದಾಗಿರದೆ ದೀರ್ಘಾವಧಿಯದಾಗಿದ್ದಿತು. ದೇವ, ಸೂರ್ಯ, ಪ್ರಾತಃಕಾಲ, ದಿವಸ, ವಸಂತ ಇವೆಲ್ಲವುಗಳ ಜನನಿಯಾದ ಉಷಾದೇವಿಯು ತನ್ನ ಸುವರ್ಣಮಯ ಕವಾಟಗಳನ್ನು ತೆರೆದು ವಿಜಯಿಯಾದ ಸೂರ್ಯನಿಗೆ ದಾರಿಯ ಮಾಡಿಕೊಡುವುದನ್ನು ಕಂಡ ವೈದಿಕ ಋಷಿಗಳ ಹೃದಯದಲ್ಲಿ ಆನಂದರಸವು ಉಕ್ಕಿ ಬಂದುದು ಅರಿದಲ್ಲ.

ಉಷೆಯು ಉದಯವಾದ ಬಳಿಕ ಸೂರ್ಯೋದಯದ ವರೆಗೆ ಆ ಧ್ರುವಪ್ರದೇಶದಲ್ಲಿ ಬಹುಕಾಲವು ಗವಿಸುತ್ತಿದ್ದಿತು. ದೀರ್ಘರಾತ್ರಿಯ ಅನಂತರದಲ್ಲಿ ದೀರ್ಘವಾದ ಉಷಃಕಾಲವು ಬರುವುದೆಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ ಋಗ್ವೇದದಲ್ಲಿಯೂ ಈ ಮಾತಿನ ಉಲ್ಲೇಖವುಂಟು. ಉಷೆಗೂ ಸೂರ್ಯೋದಯಕ್ಕೂ-ನಡುವಿನ ದೀರ್ಘವಾದ ಅವಧಿಯಲ್ಲಿ ತಮಃ ಪ್ರಕಾಶಗಳ ಹೋರಾಟದ ತುಮುಲಸ್ವರೂಪವೂ, ತಮಸ್ಸಿಗೆ ಜಯವು ಪ್ರಕಾಶಕ್ಕೆ ಅಪಜಯವು ಉಂಟಾದಂತೆ ತೋರುವದೂ, ಕೊನೆಗೆ ಪ್ರಕಾಶಕ್ಕೆ ಜಯವು ದೊರೆಯುವದೂ ನಮಗೆ ತೋರುವ ವಿಷಯಗಳು.

ದೀರ್ಘಕಾಲಿಕವಾದ ಈ ರಾತ್ರಿಯು-ಗಾಢಾಂಧಕಾರವು. ವೃತ್ರಾಸುರನು-ಆರ್ಯರಿಗೆ ಬಹು ಭಯಂಕರವಾಗಿ ತೋರಿದುದರಲ್ಲಿ ಆಶ್ಚರ್ಯವಿಲ್ಲ. ಆದುದರಿಂದ ಆ ಅಂಧಕಾರವನ್ನು ಅವರು ದಾನವನೆಂದು ಕರೆದರು ದಸ್ಯುವೆಂದು ಹಳಿದರು. ಆತನೇ ದಿವಸ(ಹಗಲು) ರೂಪವಾದ ಗೋಗಳನ್ನು ಕದ್ದು ದೀರ್ಘರಾತ್ರಿಯನ್ನುಂಟುಮಾಡಿದನೆಂದು ಆತನನ್ನು ದ್ವೇಷಿಸಿದರು ವೃತ್ರನೊಬ್ಬನೇ ಅಲ್ಲದೆ ಆತನ ತಮ್ಮ ಬಲಾಸುರ, ಶಂಬರ, ನಮುಚಿ, ಪಿಪ್ರು ಮುಂತಾದವರೂ ಈ ವೃತ್ರನಿಗೆ ಸಹಾಯಕರೆಂದು ಭಾವಿಸಿದರು. ಬಲಾಸುರನು ಗೋಗಳನ್ನು-ಪ್ರಕಾಶಕಿರಣಗಳನ್ನು-ಕದ್ದೊಯ್ದವನು. ಶಂಬರನು ನೂರಾರು ದುರ್ಭೇದ್ಯವಾದ ಕೋಟೆಗಳನ್ನು ಕಟ್ಟಿಕೊಂಡು ಅಜೇಯನಾದವನು. ಉಳಿದವರೂ ವೃತ್ರನಿಗೆ ಬೇರೆ ಬೇರೆ ಬಗೆಗಳಿಂದ ಸಹಾಯವಾದವರು. ಈ ಸಹಾಯಸಂಪತ್ತಿಯ ಉಲ್ಲೇಖದಿಂದ ವೃತ್ರಾಸುರನ ಅಭೇದ್ಯತೆಯು ಸೂಚಿತವಾಗುವುದು. ಇದರಿಂದ ಆ ಆರ್ಯಋಷಿಗಳು ತಮಗೆ-ದೇವತೆಗಳಿಗೆ-ಪ್ರಕಾಶಾಭಿಮಾನಿದೇವತೆಗೆ-ಇನ್ನು ಗೆಲವು ಬಾರದೆಂದು ನಿರಾಶರಾದರು. ತಮ್ಮ ಸೂರ್ಯನು ಮೇಲೆ ಬರುವುದಕ್ಕೆ ತಡೆಯಾಗುವಂತೆ ಸೂರ್ಯನ ಮಾರ್ಗವಾದ ದಿವ್ಯಜಲಗಳನ್ನು("ದಿವ್ಯಾಆಪಃ") ವೃತ್ರನು

ಅಹಿ(ಸರ್ಪ) ರೂಪನಾಗಿ ತಡೆದಿರುವನೆಂದು ಎದೆಗುಂದಿದರು; ತಮ್ಮ ಇಂದ್ರನು (ಪ್ರಕಾಶದೇವತೆ) ವೃತ್ರಾಸುರನ ಸೆರೆಯಲ್ಲಿ ಸಿಕ್ಕಿದನೆಂದು ಅಂಜಿದರು. ತಮ್ಮ ಇಂದ್ರನ ಪತ್ನಿ-ಪುಲೋಮ ದಾನವನ ಮಗಳು-ಶಚಿಯು ತನ್ನ ಪಿತೃಕುಲದವರಾದ ದಾನವರಲ್ಲಿ ಸಹಾನುಭೂತಿಯುಳ್ಳವಳಾಗಿರಬೇಕೆಂದು ಅವರು ಆಶಂಕಿತರಾದರು. ಸೂರ್ಯದುಹಿತೆ-ಸೂರ್ಯೆ-ಪ್ರಭೆ-ದಾನವರ ಸೆರೆಯಲ್ಲಿ ಒದ್ದಾಡುದಳೆಂದು ಅವರು ಉದ್ವಿಗ್ನರಾದರು. ಅವಳ ಸುಳಿವೇ ಇಲ್ಲದಿರುವ ಆ ದೀರ್ಘಾವಧಿಯಲ್ಲಿ ಅವಳು ಮೃತಳಾದಳೆಂದೇ ಅವರು ಊಹಿಸಿರಬೇಕು. ಆಗ ಅವರು ದಾನವರ ನಾಶಕ್ಕಾಗಿ ಮಹಾಪ್ರಯತ್ನಗಳನ್ನು ಮಾಡುವುದು ಆವಶ್ಯಕವೆಂದು ಬಗೆದರು. ಅಗ್ನಿ, ಉಷೆ, ಅಶ್ವಿನೀಕುಮಾರರು ಈ ಎಲ್ಲ (ಪ್ರಾತಃಕಾಲಿಕ) ದೇವತೆಗಳು ಇಂದ್ರನ ಜಯಕ್ಕಾಗಿ ಹೆಣಗಿದರು ಇವರು ಸೂರ್ಯೆಯ ಬಿಡುಗಡೆ ಮಾಡಿದರು ಅಶ್ವಿನೀಕುಮಾರರು ಆಕೆಯನ್ನು ವರಿಸಿದರು ಈಗ ಅವರು ತಮ್ಮ ಇಂದ್ರನಿಗೆ ಜಯವಾಗುವುದೆಂದು ಆಶಾನ್ವಿತರಾದರು; ಮತ್ತು ಆ ವಿಪನ್ನಾವಸ್ಥೆಯಲ್ಲಿ ಅವರು ಇಂದ್ರನಲ್ಲಿ ಶಕ್ತಿಯನ್ನುಂಟು ಮಾಡುವುದಕ್ಕಾಗಿ ಹಲವು (ರಾತ್ರಿ) ಯಾಗಗಳನ್ನು ಮಾಡಿದರು ಕೊನೆಗೆ ಅವರಲ್ಲಿ ಮುಖ್ಯನಾದ ದಧೀಚಿ ಋಷಿಯು ದೇವತೆಗಳ ವಿಜಯಕ್ಕಾಗಿ ಸಂಪೂರ್ಣ ಸ್ವಾರ್ಥತ್ಯಾಗವನ್ನು-ಆತ್ಮಯಜ್ಞವನ್ನು-ಮಾಡಿದನು ದೇವಶಿಲ್ಪಿ ತ್ವಷ್ಟೃವು ದಧಿಚಿ ಋಷಿಯ ಅಸ್ಥಿಯನ್ನು-ತೇಜೋಮಯ ಪ್ರಕಾಶರೇಷೆಯನ್ನು-ವಜ್ರಾಸ್ತ್ರವನ್ನಾಗಿ ಮಾಡಿ ಇಂದ್ರನಿಗೆ ಕೊಟ್ಟನು ಆಗ ಇಂದ್ರನಿಗೆ ಜಯವು ದೊರೆಯುವುದೆಂಬ ನಂಬುಗೆಯು ಅವರಲ್ಲಿ ತಲೆದೋರಿತು. ಈ ಪ್ರಕಾಶಾವಿರ್ಭಾವವೆಂದರೆ ತಮೋನಾಶವು; ಇಂದ್ರಜಯವೆಂದರೆ ವೃತ್ರನಾಶವು.

ಇಂತಹ ರೂಪಣಗಳಿಂದ ಈ ನಾಟಕದ ಸಮಗ್ರ-ಇತಿವೃತ್ತವು ಕಾವ್ಯಮಯವಾಗಿರುವುದು. ಇಲ್ಲಿ ಚರ್ಚಿಸಿದ ಈ ಒಂದು ರೂಪಣ

ದಿಂದ ನಾಟಕದ ಎಲ್ಲ ಭಾಗಗಳನ್ನು ಯಾವ ದೃಷ್ಟಿಯಿಂದ ನೋಡಬೇಕೆಂಬುದನ್ನು ಬೇರೆಯಾಗಿ ಹೇಳಬೇಕಾದುದಿಲ್ಲ ವೈದಿಕ ಕಥೆಗಳ ಕೌಶಲಪೂರ್ಣವಾದ ಈ ನಾಟಕಸಂವಿಧಾನವು ಆಮೂಲಾಗ್ರವಾಗಿ ಕುತೂಹಲಜನಕವಾಗಿರುವುದು. ದೇವ-ದಾನವರ ಸ್ವಭಾವಗಳ ಭಿನ್ನತೆಯು ಈ ನಾಟಕದಲ್ಲಿ ಸ್ವಾರಸ್ಯವಾಗಿ ಒಡಮೂಡಿರುವುದು. ದೇವ-ದಾನವರ ದ್ವೇಷದ ರಹಸ್ಯವು ನಮಗೆ ಗೋಚರವಾಗುವುದು.

ಈ ನಾಟಕದಲ್ಲಿ ಬಂದ ಪಾತ್ರಗಳು ಕೇವಲ ದೈವಿಕಗಳು; ಇಲ್ಲವೆ ಅತಿ ಮಾನುಷಗಳು. ಮಾನುಷೋಚಿತವಾದ ಆಚರಣೆಗಳ ಇಲ್ಲವೆ ಸ್ವ-ಭಾವದ ದೃಷ್ಟಿಯಿಂದ ಅವುಗಳನ್ನು ನಾವು ನೋಡಲಾಗದು. ದೈವಿಕ ಪ್ರಕೃತಿಯೂ, ಮಾನವ ಪ್ರಕೃತಿಯೂ ಭಿನ್ನವಾದುವು. ಆದರೂ ದಧೀಚಿ ಋಷಿ, ಅತ್ರಿನೀಕುಮಾರರು, ಉಷೆ ಮೊದಲಾದ ಉದಾತ್ತ ಪಾತ್ರಗಳಲ್ಲಿ ಕಂಡುಬರುವ ಆಚರಣೆಯು ಮಾನವರಿಗೆ ಮಾರ್ಗದರ್ಶಕವಾಗಿರುವುದು. ದಧೀಚಿಋಷಿಯು ದೇಶಕ್ಕಾಗಿ-ಜನತೆಗಾಗಿ-ಮಾಡಿದ ಆತ್ಮಾರ್ಪಣವು ಸಮಗ್ರ ಜನತೆಗೆ ತ್ರಿಕಾಲದಲ್ಲಿ ಆದರ್ಶಭೂತವಾದುದೆಂಬ ವಿಷಯದಲ್ಲಿ ಸಂಶಯವಿಲ್ಲ ಬಲಾಸುರನಂತಹ ದೇವಸ್ವಭಾವದ ದಾನವ ಪಾತ್ರವು ಕೂಡ ದೇವೋಚಿತಾಚರಣೆಯಿಂದ ನಮಗೆ ಸದುಪದೇಶವನ್ನೀಯುತ್ತಿದೆ. ಪ್ರಧಾನ ನಾಯಕನಾದ ಇಂದ್ರನ ಪತ್ನಿ ಶಚಿಯು, ವೈರಿಗಳ ಸೆರೆಮನೆಯನ್ನು ಸೇರಿದ ತನ್ನ ಪತಿಯ ಬಿಡುಗಡೆಗಾಗಿ ಮಾತ್ರ ಪ್ರಯತ್ನಿಸದೆ, ದೇಶದ-ಜನತೆಯ-ಉದ್ಧಾರಕ್ಕಾಗಿ ಯತ್ನಿಸಿ ಅತ್ಯಂತ ಉದಾತ್ತಭಾವವನ್ನು ತೋರಿಸಿದ್ದಾಳೆ. ಪ್ರತಿನಾಯಕನಾದ ವೃತ್ರಾಸುರನಿಂದ ಪರದೇಶಾಕ್ರಮಣ, ಪರದಾರಹರಣ, ಪೂಜ್ಯಾವಮಾನನ ಮೊದಲಾದ ಅಸಭ್ಯಾಚರಣಗಳಿಂದ ಮಾನವನು ಸರ್ವಸ್ವನಾಶ ಹೊಂದುವನೆಂಬುದನ್ನು ಕಲಿಯಬಹುದು

ಈ ನಾಟಕದ ಭಾಷೆಯು ಭಾವಪೂರ್ಣವಾಗಿಯೂ, ಪರಿಶುದ್ಧವಾಗಿಯೂ, ಆಕರ್ಷಕವಾಗಿಯೂ ಇರುವುದು. ಪಾತ್ರಗಳ ಸ್ವಭಾವಾ

ವಿಷ್ಕರಣಕ್ಕೆ ಭಾಷೆಯು ತಡೆಯು ಸಾಮಾನ್ಯವಾಗಿ ಈ ನಾಟಕದಲ್ಲಿ ಕಾಣಬರುವದಿಲ್ಲ.

ನಿಧಾರ್ಗಸ್ತ್ರ, ಕಚಾಟಿ, ಅಕಲು, ಅಂಧಃಕಾರ, ಪ್ರೇಮಳ, ಉಪ ವರ, ಮುಹತಿರೂಪಸಿ ಮೊದಲಾದ ಪರಭಾಷೆಯು ಇಲ್ಲವೆ ಪರಭಾಷಾ ವ್ಯವಹೃತವಾದ ಕೆಲವು ಶಬ್ದಗಳಿಗೆ ಮುಂದಿನ ಮುದ್ರಣದಲ್ಲಿ ಅವಶ್ಯವಾಗಿ ಅರ್ಧಚಂದ್ರವನ್ನೀಯಬೇಕೆಂದು ಸೂಚಿಸದಿರಲಾರೆವು

ಗ್ರಂಥಗಳಲ್ಲಿ ನಾವು ಸಾಮಾನ್ಯವಾಗಿ ಎರಡು ವರ್ಗಗಳನ್ನು ನೋಡಬಹುದು. ಒಂದು ವರ್ಗದ ಗ್ರಂಥಗಳು ಕೇವಲ ಜನಾಭಿರುಚಿ ಯನ್ನು ಹಿಂಬಾಲಿಸುವವು. ಎಂದರೆ ಜನರು ಯಾವ ಭಾವಗಳನ್ನು- ಯಾವ ವಿಷಯಗಳನ್ನು-ಪ್ರೀತಿಸುವರೋ ಅಂಥ ಭಾವಗಳೂ ವಿಷಯ ಗಳೂ ಉಳ್ಳುವಾಗಿರುವವು. ಇದರಿಂದ ಆ ಗ್ರಂಥಗಳಲ್ಲಿ ಹುರುಳಿಲ್ಲದ ವಿಷಯಗಳೂ, ಭಾವಗಳೂ, ಕುತ್ಸಿತ ಹಾಸ್ಯಾದಿಗಳೂ ಸೇರಿಕೊಳ್ಳುವವು. ಇನ್ನು ಎರಡನೆಯ ವರ್ಗದ ಗ್ರಂಥಗಳು ಜನರ ಅಭಿರುಚಿಯನ್ನು ತಕ್ಕ ದಾರಿಗೆ ತರುವಂತಹವು. ಅವರ ಸದಭಿರುಚಿಯನ್ನು ಬೆಳೆಯಿಸುವಂತ ಹವು. ಅವು ಕುತ್ಸಿತ ರುಚಿಗೆ ಆಸ್ಪದವೀಯದೆ, ಜನರ ಒಲವನ್ನು ತಕ್ಕ ದಾರಿಗೆ ತಂದು ಅವರ ಮನಃಸಂಸ್ಕಾರವನ್ನುಂಟು ಮಾಡುವವು. ಇವು ಜನರ ದಾಕ್ಷಿಣ್ಯಕ್ಕೆ ಒಳಗಾಗುವದಿಲ್ಲ. ಅವರನ್ನು ಅಡ್ಡದಾರಿಯ ಹಿಡಿ ಸುವುದಿಲ್ಲ. "ದೇವ-ದಾನವರು" ಎಂಬೀ ನಾಟಕವು ಎರಡನೆಯ ವರ್ಗದ ಗ್ರಂಥಗಳಲ್ಲಿ ಸಮಾವಿಷ್ಟವಾಗುವುದೆಂದು ನಾವು ಎಣಿಸುವೆವು.

ಕುಲಕರಣಿ ಶಂಕರರಾಯರು ಕನ್ನಡದಲ್ಲಿ ಹಲಕೆಲವು ಗ್ರಂಥ ಗಳನ್ನು ಬರೆದು ಕನ್ನಡಿಗರ ಪರಿಚಯದವರಾಗಿರುವರು. ಅವರ ಈ ನಾಟಕವನ್ನು ರಸಿಕರಾದ ವಾಚಕರು ಆದರದಿಂದ ಓದಿ ಅವರ ಶ್ರಮಕ್ಕೆ ಸಾಫಲ್ಯವನ್ನುಂಟುಮಾಡುವರೆಂದು ಆಶಿಸುತ್ತೇವೆ

ಟ್ರೇನಿಂಗ್ ಸ್ಕೂಲ್, ಧಾರವಾಡ
ಪ್ರಮೋದ ಸಂ|| ವಿಜಯಾ ದಶಮಿ.

ಮ. ಪ್ರ. ಪೂಜಾರ.

## ಈ ನಾಟಕದಲ್ಲಿ ಉಲ್ಲಿಖಿತವಾದ ಮುಖ್ಯ ಪಾತ್ರಗಳು.

ವೃತ್ರಾಸುರ .... ....ದಾನವ ಸಾಮ್ರಾಟ

ಬಲಾಸುರ .... ....ವೃತ್ರಾಸುರನ ಆಜ್ಞಾಧಾರಕ ತಮ್ಮ

ಇಂದ್ರ .... ....ದೇವರಾಜ

ದಧೀಚಿ .... ....ದೇವತೆಗಳ ಗುರು

ಋಷಿಗಳು .... ....ದಮನ, ಮೇಧಾತಿಥಿ, ಶಂಖ

ತ್ವಷ್ಟಾ .... ....ದೇವತೆಗಳ ಶಿಲ್ಪಿಗ

ಋಭುಗಳು .... ....ತ್ವಷ್ಟಾನ ಶಿಷ್ಯರು

ಅಶ್ವಿನೀಕುಮಾರರು ದಸ್ರ ಹಾಗು ನಾಸತ್ಯ ....ದಧೀಚಿಯ ಶಿಷ್ಯರು

ಪಿಪ್ರು ಹಾಗು ಉರಣ ... ....ವೃತ್ರಾಸುರನ ಸೇವಕರು

ಸೂರ್ಯೆ ....ಸೂರ್ಯನ ಮಗಳು ಅಶ್ವಿನೀಕುಮಾರರ ಹೆಂಡತಿ

ಉಷೆ .... ....ಉಷಃಕಾಲದ ದೇವಿ

ಶಚಿ ....ದಾನವ ಸಾಮ್ರಾಟ ಪುಲೋಮನನ ಮಗಳು ಪೌಲೋಮಿ

ದಧೀಚಿಯ ಸಾಕುಮಗಳಾಗಿ ಶಚಿಯಾದಳು.

ಇಂದ್ರನ ಹೆಂಡತಿಯಾಗಿ ಇಂದ್ರಾಣಿಯಾದಳು.

# ಲೇಖಕನ ಎರಡು ಮಾತುಗಳು.

ಪ್ರಸ್ತುತ ನಾಟಕವು ಬಂಗಾಲೀಭಾಷೆಯೊಳಗಿನ **'ದೇವಾಸುರ'** ಎಂಬ ಅತ್ಯುತ್ತಮ ನಾಟಕದ ರೂಪಾಂತರವಾಗಿದೆ. ಇದನ್ನು ಯಾವ ಉದ್ದೇಶದಿಂದ ಬರೆದು ನಮ್ಮ ಕನ್ನಡಬಂಧುಗಳ ಮುಂದಿಟ್ಟಿರುವೆನೆಂಬದನ್ನು ನಮ್ಮ ಗುರುವರ್ಯ ಶ್ರೀ|| ಮ ಪ್ರ. ಪೂಜಾರರವರು ತಮ್ಮ ಮುನ್ನುಡಿಯಲ್ಲಿ ಜನನಿದರ್ಶನಕ್ಕೆ ತಂದುಕೊಟ್ಟಿರುತ್ತಾರಾದ್ದರಿಂದ ಅದನ್ನು ಮತ್ತೆ ಹೇಳಬೇಕಾದುದಿಲ್ಲ ಈ ಪುಸ್ತಕವು ನಮ್ಮ ವಾಚಕರಿಗೆ ಚೆನ್ನಾಗಿ ರುಚಿಸಿದರೆ, ಇಂಥ ಮತ್ತೆ ಕೆಲ ಹೊಸ ಕೃತಿಗಳನ್ನು ರಚಿಸಿ, ಅವರ ಮುಂದೆ ಇಡಬೇಕೆಂದಿರುತ್ತೇನೆ. ಯಾವುದಕ್ಕೂ ನನ್ನ ಕನ್ನಡಿಗರ ಗುಣಗ್ರಾಹಕತೆಯೂ, ಆಶ್ರಯ-ಸಹಾಯಗಳೂ ಕಾರಣವಾಗಿವೆ.

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಿರುವ ನಮ್ಮ ಗುರುವರ್ಯರಿಗೆ ನಾನು ತುಂಬಾ ಉಪಕೃತನಾಗಿರುತ್ತೇನೆ; ಅಲ್ಲದೆ ಇದನ್ನು ಸಕಾಲಕ್ಕೆ ಚೆನ್ನಾಗಿ ಮುದ್ರಿಸಿ ಕೊಟ್ಟ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನ ಮ್ಯಾನೇಜರರಾದ ಮಿ. ಭಿ. ಪ. ಕಾಳೆ, ಇವರನ್ನೂ ಕೊಂಡಾಡದಿರೆನು.

ಕನ್ನಡಿಗರ ಸೇವಕ,

ಲೇಖಕ.

———

ಶ್ರೀ

# ದೇವ-ದಾನವರು.

## ಪ್ರಥಮಾಂಕ.

(ದೂರದಲ್ಲಿ ತುಷಾರಾಚ್ಛಾದಿತ ಪರ್ವತಶಿಖರವು ಕಾಣುತ್ತಿರುವದು. ಅರಣ್ಯದ ಒಂದು ಬದಿಯಲ್ಲಿ ಮಹಾಪ್ರತಾಪಶಾಲಿಯಾದ ವೃತ್ರಾಸುರನ ಶಿಲಾನಿರ್ಮಿತದುರ್ಗವು. ದುರ್ಗದ ಒಂದು ಗವಾಕ್ಷವು ಉನ್ಮುಕ್ತವಾಗಿದೆ)

ರಾತ್ರಿಯ ಕೊನೆಯ ಜಾವ. ಸೂರ್ಯ ಸುತೆಯಾದ ಸೂರ್ಯೆಯು ಕೋಟೆಯಲ್ಲಿ ಒಂದಿನಿಯಾಗಿದ್ದಾಳೆ. ಬೇಡಿಗಳಿಂದ ಬಂಧಿಸಲ್ಪಟ್ಟವಳಾಗಿ ಗಜಗಳನ್ನು ಹಿಡಿದುಕೊಂಡು ಕಿಡಕಿಯಲ್ಲಿ ನಿಂತಿದ್ದಾಳೆ. ಕೆಳಗಡೆಯಲ್ಲಿ ಕಾವಲುಗಾರನಾಗಿದ್ದ ಬಲಾಸುರನು ಕುಳಿತು ತೂಕಡಿಸುತ್ತಿದ್ದಾನೆ.

(ಉಷೆಯ ಸಂಗೀತ ಸ್ವರವು ಕೇಳಬರಹತ್ತಿತು. ಬಲಾಸುರನು ಎಚ್ಚತ್ತು ನೋಡಿದನು. ಸೂರ್ಯೆಯು ನಿಂತು ನಿದ್ರಿಸುತ್ತಿರುವುದನ್ನು ಕಂಡನು. ಕ್ಷಣಕಾಲ ಸತೃಷ್ಣನಯನಗಳಿಂದ ಸೂರ್ಯೆಯನ್ನು ನೋಡಿದನು. ಬಳಿಕ ಮೆಲ್ಲಮೆಲ್ಲನೆ ನಡೆದು ಬೇರೆ ಕಡೆಗೆ ಹೊರಟನು. ಉಷೆಯ ಗಾಯನವು ಸ್ಪಷ್ಟವಾಗಿ ಕೇಳಹತ್ತಿತು. ಪ್ರಕಾಶವೂ ಒಡಮೂಡಿತು "ವ್ಯಪನಶೀಲಳೂ ವಿಚಿತ್ರದೀಪ್ಯಮಾನಳೂ" ಆದ ಉಷಾದೇವಿಯು ಧರೆಗೆ ಅವತರಿಸಿ "ನರ್ತಕಿಯಂತೆ ರೂಪವನ್ನು ತೋರಹತ್ತಿದಳು. ನಿತ್ಯಯೌವನ ಸಂಪನ್ನೆಯೂ, ಶುಭ್ರವಸನೆಯೂ, ಆಕಾಶ ದುಹಿತೆಯೂ ಆದ ಉಷೆಯು ಅಂಧಃಕಾರವನ್ನು ಹೋಗಲಾಡಿಸಿ ದೃಷ್ಟಿಗೋಚರಳಾದಳು")

ಉಷೆ:—ಇವಳಾರು? ನಿಂತುಕೊಂಡೇ ನಿದ್ರೆ ಮಾಡುತ್ತಿರುವಳು! (ದಿಟ್ಟಿಸಿ ನೋಡಿ) ರವಿತನಯೆಯಾದ ಸೂರ್ಯೆಯು. ಇವಳು ಇಲ್ಲಿಗೇಕೆ ಬಂದಿರಬಹುದು?............ ಸಖಿ, ನಾನು ಬಂದಿರುವೆನು. ಎಚ್ಚತ್ತು

ನೋಡು. ನಿನ್ನನ್ನು ಬಹಳವಾಗಿ ಹುಡುಕಿದೆನು. ಎಲ್ಲೆಲ್ಲಿಯೂ ಹುಡುಕಿದೆನು. ಕಣ್ಣಿಗೆ ಬಿದ್ದಿರಲಿಲ್ಲ. ಈಗ ಅಕಸ್ಮಾತ್ತಾಗಿ ಕಾಣಿಸಿಕೊಂಡಿರುವೆ ಇಳಿದು ಬಾ.

ಸೂರ್ಯೆ:—(ಎಚ್ಚತ್ತು ನೋಡಿ, ಕೈಗಳ ಸಂಕೋಲೆಯನ್ನು ತೋರಿ ದೀನವಾಣಿಯಿಂದ) ಪ್ರಿಯಸಖಿ, ನಾನು ನಿನ್ನಂತೆ ಸ್ವತಂತ್ರಳಿಲ್ಲ. ಬಂದಿನಿಯು. ಹೇಗೆ ಇಳಿದು ಬರಲಿ?

ಉಷೆ:—ನೀನು ಬಂದಿನಿಯೆ? ಯಾರ ಬಂದಿನಿಯು? ನಿನ್ನನ್ನು ಪ್ರತಿಬಂಧದಲ್ಲಿರಿಸಿದ ಸಾಹಸಿಗನಾರು?

ಸೂರ್ಯೆ:—ಪ್ರೇಮಳ ಗೆಳತಿಯೆ, ಏನೆಂದು ಹೇಳಲಿ? ವಿಶ್ವದೇವನಾದ ಸೂರ್ಯನ ಮಗಳಾಗಿಯೂ ನಾನಿಂದು ಬಂದಿನಿಯಾಗಿರುವೆನು!

ಉಷೆ:—ಈ ದುರ್ಗವಾರದು? ಈ ದುರ್ಗದಲ್ಲಿ ನಿನ್ನನ್ನು ಸೆರೆಯಲ್ಲಿರಿಸಿದವನಾವನು?

ಸೂರ್ಯೆ:—ಮೋಡದಂತೆ ಅವನ ಬಣ್ಣವಿದೆ. ಬೆಂಕಿಯಂತೆ ಅವನ ಕಣ್ಣುಗಳಿವೆ. ಬಿರುಗಾಳಿಯಂತೆ ಅವನ ನಡುಗೆಯಿದೆ. ದಾನವನವನು........ ದೈತ್ಯನವನು........ಅಸುರನವನು........ದಸ್ಯುವವನು!

ಉಷೆ:—ಆ ದುಸ್ಸಾಹಸಿಕನಾರು? ದೇವತೆಗಳು ಸರಸ್ವತಿಯ ತೀರದಲ್ಲಿ ಸುಖದಿಂದ ವಾಸಿಸಿದ್ದರು. ರಾತ್ರಿಯಲ್ಲಿ ನಿದ್ರಾಸಕ್ತರಾಗಿರುವ ಅವರು ನನ್ನ ನೂಪುರಗಳ ಸ್ವರವನ್ನು ಕೇಳುತ್ತಲೆ ಜಾಗ್ರತರಾಗೆದ್ದು, ಸಾಮವೇದವನ್ನು ಪಠಿಸುತ್ತಿದ್ದರು. ಅವರ ಈ ವೇದ ಗಾಯನದ ಇಂಚರದಿಂದ ದಶದಿಕ್ಕುಗಳು ವ್ಯಾಪ್ತವಾಗಿ ಹೋಗುತ್ತಿದ್ದುವು. ಆದರೆ ಶಂಬರಾಸುರನು ಅಲ್ಲಿ ಉತ್ಪಾತವೆಬ್ಬಿಸಿ, ಆ ದೇವ ಭೂಮಿಯನ್ನು ಹಾಳುಮಾಡಿಬಿಟ್ಟನು. ಈಗ ಅಲ್ಲಿ ದೇವತೆಗಳ ಸಾಮಗಾಯನದ ಬದಲು ದೈತ್ಯರ ತಾಂಡವ ನೃತ್ಯವು ನಡೆಯುತ್ತಲಿದೆ. ಇದು ಆ ಶಂಬರಾಸುರನ ಪಟ್ಟಣವೆ?

ಸೂರ್ಯ:— ಇವನು ಆ ಶಂಬರಾಸುರನಲ್ಲ ಅವನಿಗಿಂತಲೂ ಭಯಂಕರನು! ನೀನವನನ್ನು ನೋಡಿದವಳಲ್ಲ. ಮಾತಾಃಉತ್ತ ನಿಂತು ಕಾಳರಕ್ಕಸನ ಕೈಯಲ್ಲಿ ಸಿಗಬೇಡ. ಹೋಗು, ಬೇಗನೆ ಓಡಿ ಹೋಗಿ ಪಾರಾಗು!

ಉಷೆ:—ದೃಶ್ಯದ್ವತಿಯ ತೀರದಲ್ಲಿ ದೇವತೆಗಳು ಯಜ್ಞಮಾಡುತ್ತಿದ್ದರು. ಯಜ್ಞಧೂಮವು ಎಲ್ಲೆಲ್ಲಿಯೂ ಇರುಗಿತ್ತು. ನಮುಚಿ ದೈತ್ಯನು ಹೊಗೆಯಲ್ಲಿ ಅಡಗಿ ಒಂದು ಹಾವಳಿಯನ್ನೆಬ್ಬಿಸಿದನು. ಯಜ್ಞಭೂಮಿಯು ದೇವತೆಗಳ ರಕ್ತದಿಂದ ಅಪವಿತ್ರವಾಗಿ ಹೋಯಿತು ದೃಶ್ಯದ್ವತಿಯ ಜಲವು ರಕ್ತರಂಜಿತವಾಗಿ ದೇವತೆಗಳನ್ನು ತೇಲಿಸಿಕೊಂಡೊಯ್ದಿತು. ಇದು ಆ ದುಷ್ಟ ನಮುಚಿಯ ನಗರವೇನು?

ಸೂರ್ಯ:—ಇವನು ನಮುಚಿಯೂ ಅಲ್ಲ. ಅವನಿಗಿಂತಲೂ ಬಹು ಭೀಕರನು. ನೀನವನನ್ನು ಕಂಡವಳಲ್ಲ. ಕಾಣಬಯಿಸಬೇಡ. ನನ್ನ ಹೇಳಿಕೆಯಂತೆ ಓಡಿ ಹೋಗಿ ಪಾರಾಗು. ತಡ ಮಾಡಿದರೆ ನನ್ನಂತೆ ನೀನೂ ಸಂಕಟದಲ್ಲಿ ಸಿಗುವೆ!

ಉಷೆ:—ಓಡಿ ಹೋಗಲಾರೆನು. ಅವನನ್ನು ನೋಡಿಯೇ ಬಿಡುವೆನು. ದಾನವರು ದೇವಭೂಮಿಯನ್ನು ಜಯಿಸಿದ್ದಾರೆ ದೇವತೆಗಳು ಅಸುರರ ಪೀಡೆಯನ್ನು ತಾಳಲಾರದೆ ಪಲಾಯನ ಮಾಡಿ, ಗಿರಿ-ಗಹ್ವರಗಳನ್ನು ಆಶ್ರಯಿಸಿದ್ದಾರೆ. ಜಯ ಸಂಪಾದನೆಯ ಸಲುವಾಗಿ ದಧೀಚಿ ಋಷಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡು ಯಜ್ಞ ಮಾಡಬೇಕೆಂದಿದ್ದರು; ಆದರೆ ನೀನು ಮಾಯವಾಗಿ ಹೋದ ವಾರ್ತೆಯನ್ನು ಕೇಳಿ ಹತಾಶರಾಗಿದ್ದಾರೆ ಶೋಕಸಂತಪ್ತರಾಗಿದ್ದಾರೆ. ಸೂರ್ಯದೇವನಂತೂ ಹೌಹಾರಿ ಹೋಗಿದ್ದಾನೆ. ಇಂದ್ರದೇವನು ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತಿದ್ದಾನೆ. ವರುಣನು ಮಹಾಸಾಗರಗಳ ತಳಗಳಲ್ಲಿ ಅಲೆದು, ಹುಡುಕುತ್ತಿದ್ದಾನೆ. ದಧೀಚಿಋಷಿಯು ತಪಶ್ಚರ್ಯವನ್ನುಳಿದು ನಿನ್ನ

ಅನ್ವೇಷಣ ಮಾಡುತ್ತ ಅಲೆಯುತ್ತಿದ್ದಾನೆ. ಅಶ್ವಿನೀ ಕುಮಾರರಂತೂ ಹುಚ್ಚರಾಗಿದ್ದಾರೆ. ವನಗಳಲ್ಲೂ ಪರ್ವತಗಳಲ್ಲೂ ಸಂಚರಿಸುತ್ತಿದ್ದಾರೆ. 'ಸೂರ್ಯೆ, ನೀನೆಲ್ಲಿ?' ಎಂದರಚಿಕೊಳ್ಳುತ್ತಿದ್ದಾರೆ.

ಸೂರ್ಯೆ:—ಪ್ರಿಯಸಖಿ, ನೀನು ಈಗಳೆ ಹೊರಡು. ಅವರನ್ನು ಸಾಂತ್ವನೆಗೊಳಿಸು. ಅವರು ನನಗೋಸುಗ ಹುಚ್ಚರಂತೆ ಅಲೆಯುತ್ತಿರುವದು ಅಪಾಯಕರವು.

ಉಷೆ:—ಅವರನ್ನು ನಾನು ಹೇಗೆ ಸಾಂತ್ವನಗೊಳಿಸಲಿ? ಅವರು ನಿನ್ನನ್ನು ಕಂಡ ಹೊರತು, ಸಮಾಧಾನ ಹೊಂದರು.

ಸೂರ್ಯೆ:—ಅವರು ನನ್ನನ್ನು ಹೇಗೆ ಕಾಣಬೇಕು? ಇವನು ಶಂಬರನಲ್ಲ, ನಮುಚಿಯಲ್ಲ, ಶುಷ್ಣನಲ್ಲ. ಇವರೆಲ್ಲರ ರಾಜನು. ಇವನು ಪುಲೋಮನನ್ನು ಸಂಹರಿಸಿ, ದಾನವರ ಸಾರ್ವಭೌಮನಾಗಿದ್ದಾನೆ. ಇವನ ಹೆಸರನ್ನು ನೀನು ಕೇಳಿಲ್ಲವೆ? ಇವನ ಕತೆಯನ್ನು ನೀನು ಅರಿತಿಲ್ಲವೆ?

ಉಷೆ:—ನನಗೆ ಈಗ ಹೊಳೆಯಿತು. ಈ ದುರ್ಗವು ವೃತ್ರಾಸುರನದು.

ಸೂರ್ಯೆ:—ಅಹುದು, ನಾನು ವೃತ್ರಾಸುರನ ಬಂದಿನಿಯು.

ಉಷೆ:—ವೃತ್ರಾಸುರನು ಮಹಾಭಯಂಕರನು. ಬಹು ಕ್ರೂರನು. ದಧೀಚಿಋಷಿಯ ಆಶ್ರಮವನ್ನು ಹಾಳು ಮಾಡಿ ಬಿಟ್ಟಿದ್ದಾನೆ. ಇವನ ತಮ್ಮನಾದ ಬಲಾಸುರನು............

ಸೂರ್ಯೆ:—ಅವನೂ ಇದ್ದಾನೆ. ಅವನ ನೆನಪಾಗುತ್ತಲೆ ನನ್ನ ದೇಹದಲ್ಲಿ ನಡುಗು ಹುಟ್ಟುವದು! (ಕಂಪಿಸುವಳು) ರಾಕ್ಷಸನವನು!

ಉಷೆ:—ದಧೀಚಿ ಋಷಿಯ ಆಶ್ರಮದಲ್ಲಿ ಅಂಗಿರಾ ಋಷಿಯ ಆಕಳ ಹಿಂಡು ಇತ್ತು. ಬಲಾಸುರನು ಆ ಗೋಧನವನ್ನು ಸುಲಿಗೆ ಮಾಡಿದ್ದಾನೆ.

ಸೂರ್ಯೆ:—ಮುನಿಕುಮಾರಿ ಶಚಿಯು ಸುರಕ್ಷಿತಳಾಗಿರುವಳೆ?

ಉಷೆ:—ದಧೀಚಿಋಷಿಯು ಅವಳನ್ನು ಜಾಗ್ರತೆಯಿಂದ ಜೋಪಾನ ಮಾಡುತ್ತಿದ್ದಾನೆ. ಋಷಿಯ ಸಂರಕ್ಷಣೆಯಲ್ಲಿ ಅವಳು ಸುರಕ್ಷಿತಳಾಗಿದ್ದಾಳೆ. ಇನ್ನು ಮಾತು ಸಾಕು. ಹೊರಡುವೆನು. ದೈತ್ಯರು ಅಲ್ಪಾವಕಾಶದಲ್ಲಿಯೆ ನಿದ್ದೆಯಿಂದೆಚ್ಚರಿಯುವರು. ಅಷ್ಟರಲ್ಲಿಯೆ ನಾನು ದೇವತೆಗಳಿಗೆ ನಿನ್ನ ಬಂಧನವಾರ್ತೆಯನ್ನರುಹಿ, ಅವರನ್ನಿಲ್ಲಿಗೆ ಕರೆತರುವೆನು. (ಹೊರಡುವಳು.)

ಸೂರ್ಯೆ:-ಸಖಿ, ಬೇಡ! ಅವರನ್ನಿಲ್ಲಿಗೆ ಕರೆದು ತರುವದು ಬೇಡ!

ಉಷೆ:—(ಹೊರಳಿ ನಿಂತು)ಅದೇಕೆ?

ಸೂರ್ಯೆ:— ಈ ದುರ್ಗವು ಶಿಲಾಮಯವಾದ್ದು. ವೃತ್ರಾಸುರನ ಹೃದಯವು ಈ ಶಿಲೆಗಳಿಗಿಂತಲೂ ಕಠೋರವಾದುದು. ಕೆಂಡದಂತಹ ಕಣ್ಣುಳ್ಳವನವನು. ಕಾಮೋಡದಂತೆ ಮೈಬಣ್ಣವುಳ್ಳವನವನು. ನನ್ನ ಎದೆಯು ಅವನ ಭಯದಿಂದ ಡವಡವನೆ ಹಾರುತ್ತಿದೆ! ದೇವತೆಗಳನ್ನು ವೃತ್ರಾಸುರನ ಕಚಾಟಿಯಲ್ಲಿ ಸಿಲುಕಿಸುವದು ತುಂಬ ವಿಪತ್ಕರವು. ದೇವತೆಗಳು ಇಲ್ಲಿಗೆ ಬರುವದು ಬೇಡ!

ಉಷೆ:—ಗೆಳತಿಯೆ, ನೀನು ಭಯಗೊಳ್ಳದಿರು. ಹೇಗಾದರೂ ಮಾಡಿ ನಿನ್ನನ್ನು ಬಂಧನದಿಂದ ಬಿಡಿಸಲಿಕ್ಕೆ ಬೇಕು. ದೇವತೆಗಳು ನಿನ್ನಿಂದ ದೀಪ್ತಿಯುತರಾಗಿದ್ದರು. ನಿನ್ನ ಅವಿದ್ಯಮಾನದಲ್ಲಿ ಕಾಂತಿಹೀನರಾಗಿ ಹೋಗಿದ್ದಾರೆ. ಸುರಲೋಕದ ನಗುವು ಇಂದು ಅಂಧಕಾರಮಯವಾದ ಈ ಕಲ್ಲಿನ ಕೋಟೆಯಲ್ಲಿ ಸೆರೆಸಿಕ್ಕಿದೆ. ಇದನ್ನು ದೈತ್ಯನ ಸೆರೆಮನೆಯಿಂದ ಪಾರು ಮಾಡಿದ ಹೊರತು ದೇವತೆಗಳು ಜಯಶೀಲರಾಗರು. ಇನ್ನು ನಾನು ಹೋಗುವೆನು. ಓಹೋ, ಅಲ್ಲಿ ಯಾವನೋ ಬರುತ್ತಿರುವನು. ವಿಕಟ ರೂಪದ ದೈತ್ಯನವನು. ಸಖಿ, ಬಹು ಸಾವಧಾನತೆಯಿಂದಿರು. (ಅದೃಶ್ಯಳಾಗುವಳು.)

(ಬಲಾಸುರನು ಮೆಲ್ಲಮೆಲ್ಲನೆ ನಡೆದು ಬರುವನು. ಸೂರ್ಯೆಯು ಅವನನ್ನು

ಹೋದಿ ಭಯಕಂಪಿತಳಾಗಿ ಆರ್ತನಾದ ಮಾಡುವಳು. ಭಕ್ತನು ತನ್ನ ಇಷ್ಟದೇವತೆಯ ಮುಂದೆ ನಿಂತುಕೊಳ್ಳುವಂತೆ ಬಲಾಸುರನು ಕಿಡಕಿಯ ಕೆಳಗೆ ನಿಂತು ನೋಡಿದನು. ಸೂರ್ಯೆಯು ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.)

ಬಲಾಸುರ:—ಎಲೆ ನನ್ನ ಬೆಂಕಿಯೆ, ನನ್ನ ಬೆಳಕೆ, ದಯದೋರು. ಒಂದು ಸಲವಾದರೂ ನನ್ನನ್ನು ಪ್ರಸನ್ನದೃಷ್ಟಿಯಿಂದ ನೋಡು. (ಸೂರ್ಯೆಯು ಹಾಗೆಯೆ ಇರುವಳು) ಎಲೆ ನನ್ನ ಬೆಂಕಿಯ ಚಕಮುಕಿಯೇ, ನನ್ನ ಬೆಳಕಿನ ದೀಪವೆ ಹೀಗೇಕೆ ಮಾಡುತ್ತಿರುವೆ? ಮಾತಾಡಲೊಲ್ಲೆ ಯೇಕೆ? ಪ್ರಸನ್ನಳಾಗು. ಮಾತಾಡು. ನಾನು ನಿನಗೋಸುಗ ಮಧು ವನ್ನು ತಂದಿದ್ದೇನೆ. ಮಲ್ಲಿಗೆಯ ಮಾಲೆಯನ್ನು ತಯಾರಿಸಿ ತಕ್ಕೊಂಡು ಬಂದಿದ್ದೇನೆ.

ಸೂರ್ಯೆ:—ನನಗೆ ಏನೂ ಬೇಡ. ನೀನು ಇಲ್ಲಿಂದ ಹೊರಟು ಹೋಗು.

ಬಲಾಸುರ:—ಹೀಗೇಕೆ ಮಾಡುವೆ? ಮೋರೆಯನ್ನು ಹೊರದೆಗೆ. ಕೃಪಾದೃಷ್ಟಿಯನ್ನು ಬೀರು. ದಾನವರೆಲ್ಲರು ಸುರೆಯ ಸೇವನೆಯಿಂದ ಮೈಮರೆದು ಮಲಗಿದ್ದಾರೆ. ನಾನು ನಿನ್ನನ್ನು ಕೆಲಕಾಲದ ಮಟ್ಟಿಗೆ ಬಂಧಮುಕ್ತಳನ್ನಾಗಿ ಮಾಡಬಲ್ಲೆನು. ನೀನು ಮಧುವನ್ನು ಸೇವಿಸಿ ಸಂತೋಷಿತಳಾಗು. ಮಧುವು ಬೇಡಾಗಿದ್ದರೆ, ನಾನು ನಿನಗೆ ಹಾಲನ್ನು ತಂದುಕೊಡಬಲ್ಲೆನು. ನಾನು ನಿನಗೋಸುಗ ಆಕಳಹಿಂಡನ್ನು ಹೊಡೆದು ಕೊಂಡು ಬಂದಿರುವೆನು.

ಸೂರ್ಯೆ:—ದಸ್ಯು ನೀನು! ನಿನ್ನದೇನೂ ನನಗೆ ಬೇಡ! ನೀನು ದಧೀಚಿಋಷಿಯ ಆಶ್ರಮವನ್ನು ಧ್ವಂಸಮಾಡಿರುವೆ! ಅಂಗಿರಾಋಷಿಯ ಆವುಗಳನ್ನು ಅಪಹರಿಸಿರುವೆ! ಈ ಪಾಪವು ನಿನಗೆ ತಟ್ಟದಿರದು! ಋಷಿಗಳ ಕೋಪದಿಂದ ನೀನು ಬೇಗನೆ ಸತ್ತುಹೋಗುವೆ!

ಬಲಾಸುರ:—ಸುಂದರಿ, ಮರಣಕ್ಕೆ ಹೆದರಿದವನು ನಾನಲ್ಲ! ಆದರೆ

ಮರಣದ ಮೊದಲು, ನಿನ್ನ ಪ್ರೇಮ ಸಂಪಾದನೆ ಮಾಡಬೇಕೆಂದಿದ್ದೇನೆ. ನೀನು ಒಂದೇ ಒಂದು ಬಾರಿ ಪ್ರೇಮಕಟಾಕ್ಷದಿಂದ ನನ್ನನ್ನು ನೋಡು. ಪ್ರೀತಿಸುವೆನೆಂದುಚ್ಚರಿಸು. ಆ ಬಳಿಕ ನಾನು ಮರಣಕ್ಕೆ ಸಂತೋಷದಿಂದ ಸಿದ್ಧನಾಗುವೆನು.

ಸೂರ್ಯೆ:—ಎಲೊ ರಾಕ್ಷಸನೆ, ಸೂರ್ಯನ ಮಗಳು ನಾನು. ನಾನು ನಿನ್ನನ್ನು ಪ್ರೀತಿಸಲಿಯಾ? ನೀನು ನನ್ನ ಪ್ರಣಯವನ್ನು ಸಂಪಾದಿಸುವೆಯಾ? ಅಸಂಭವ! ನನ್ನ ತಂದೆಯ ಶಕ್ತಿಯು ಅಂಥಿಂಥದಲ್ಲ. ನಿನ್ನನ್ನು ಸುಟ್ಟು ಬಿಡುವನು. ನೀನು ಅವನ ಕೋಪಕ್ಕೊಳಗಾಗಿ ಭಸ್ಮೀಭೂತನಾಗಿ ಹೋಗುವೆ!

ಬಲಾಸುರ:—ದೇವಿ, ಏಕೆ ನನ್ನ ಮೇಲೆ ಹೀಗೆ ಕೋಪಗೊಳ್ಳುತ್ತಿರುವೆ? ನಾನು ಮಾಡಿದ್ದಾದರೂ ಏನು? ನಿನ್ನ ಸುಂದರ ಮುಖವನ್ನು ನೋಡುವ ಇಚ್ಛೆ ನನಗಿದೆ ನಿನ್ನ ಮಧುರಭಾಷಣವನ್ನು ಆಲಿಸುವ ಅಪೇಕ್ಷೆ ನನಗಿದೆ. ಇದೇನು ನನ್ನ ತಪ್ಪೆ? ನೀನು ನನ್ನ ಈ ಬಯಕೆಗಳನ್ನು ಏಕೆ ಪೂರೈಸಬಾರದು? ನಾನು ನಿನಗೆ ನನ್ನ ಸರ್ವಸ್ವವನ್ನೂ ಕೊಡಬಲ್ಲೆನು. ನೀನು ಆಜ್ಞೆ ಮಾಡುವದೊಂದೆ ತಡ! ವಿಧೇಯನಾದ ಸೇವಕನು ಒಡೆಯನ ಅಪ್ಪಣೆಯನ್ನು ಪಾಲಿಸುವಂತೆ ನಾನು ನಿನ್ನ ಮಾತು ಕೇಳುವೆನು.

ಸೂರ್ಯೆ:—(ಮೋರೆಯ ಮೇಲಿನ ಕೈಗಳನ್ನು ತೆಗೆದು) ನಿಜವೆ? ನೀನು ನನ್ನ ಮಾತನ್ನು ನಡಿಸುವೆಯಾ? ನನಗೆ ಬೇಕಾದ್ದು ಮುಕ್ತಿ! ನಾನು ಈಗಳೆ ಈ ಸ್ಥಳದಿಂದ-ಈ ಬಂಧನದಿಂದ ಬಿಡುಗಡೆ ಹೊಂದಿ ಹೋಗಬೇಕೆಂದಿದ್ದೇನೆ. ನೀನು ನನ್ನನ್ನು ಪ್ರೀತಿಸಿದ್ದೇ ನಿಜವಿದ್ದರೆ, ನನ್ನನ್ನು ಬಂಧಮುಕ್ತಳನ್ನಾಗಿ ಮಾಡು.

ಬಲಾಸುರ:—ಬೆಳಕಿನ ಮಗಳೆ, ಇದು ನನ್ನ ಶಕ್ತಿಯ ಹೊರಗಿನ ಕೆಲಸ. ನಾನಿದನ್ನು ಮಾಡಲಾರೆನು. ಯಾಕೆಂದರೆ, ನಿನ್ನನ್ನು ಸೆರೆಹಿಡಿದು

ತಂದವನು ನಾನಲ್ಲ. ಇಲ್ಲಿ ಪ್ರತಿಬಂಧದಲ್ಲಿರಿಸಿದವನು ನಾನಲ್ಲ. ಈ ಕೆಲಸವು ಅಣ್ಣನಾದ ವೃತ್ರಾಸುರನದು. ನಾನು ಅವನ ಅಪ್ಪಣೆಯಿಲ್ಲದೆ ನಿನ್ನನ್ನು ಬಂಧನದಿಂದ ಬಿಡುಗಡೆ ಮಾಡಲಾರೆನು. ಅಣ್ಣನು ಸಾಮಾನ್ಯನಲ್ಲ. ಅವನ ಶಕ್ತಿಯು ಅಂಥಿಂಥದಲ್ಲ. ನಾನವನ ತಮ್ಮನಾಗಿದ್ದರೂ ವಿಧೇಯ ಸೇವಕನಂತಿದ್ದೇನೆ. ಅವನ ಆಜ್ಞಾಬಾಹಿರನಾಗಿ ವರ್ತಿಸುವ ಧೈರ್ಯವು ನನಗಿಲ್ಲ. ಅವನಿಗಿಂತಲೂ ಹೆಚ್ಚಾದ ಶಕ್ತಿಯು ನನ್ನಲ್ಲಿದ್ದರೆ, ನಾನೇ ಸಾರ್ವಭೌಮನಾಗುತ್ತಿದ್ದೆನು ನಿನ್ನನ್ನು ಪಟ್ಟರಾಣಿಯನ್ನಾಗಿ ಮಾಡಿ, ರಾಜಭೋಗಗಳನ್ನು ಭೋಗಿಸುತ್ತಿದ್ದೆನು.

ಸೂರ್ಯೆ:—ನಿನ್ನಿಂದ ನನಗೆ ಪ್ರಯೋಜನವಿಲ್ಲ ನಿನ್ನನ್ನು ಕಂಡರೆ ನನಗೆ ಹೆದರಿಕೆಯಾಗುತ್ತಿದೆ. ಇನ್ನು ನೀನಿಲ್ಲಿರಬೇಡ. ದೂರ ಹೋಗು.

ಬಲಾಸುರ:—ಏಕೆ? ನನ್ನನ್ನು ನೋಡುವದರಿಂದ ನಿನ್ನಲ್ಲಿ ತಿರಸ್ಕಾರವುಂಟಾಗುತ್ತಿದೆಯೆ? ಹೀಗೇಕೆ ಆಗಬೇಕು? ನಾನು ಕಪ್ಪುಬಣ್ಣದವನಿರುವೆನೆಂದೆ? ಇರಬಹುದು! ನಿನ್ನ ಬಣ್ಣವು ಹಾಲಿನಂತೆ ಬೆಳ್ಳಗಿದೆ. ಅಂತೆಯೆ ಅದು ನನ್ನನ್ನು ಹುಚ್ಚನನ್ನಾಗಿ ಮಾಡಿದೆ! ನಿನಗೆ ಈ ವರ್ಣವನ್ನು ದಯಪಾಲಿಸಿದವರಾರು? ಹೇಳು ನಾನವನನ್ನು ಪೂಜಿಸುವೆನು. ಪ್ರಸನ್ನಮಾಡಿಕೊಳ್ಳುವೆನು. ಅವನ ಬಳಿಯಲ್ಲಿ ನಿನ್ನಂತಹ ವರ್ಣವನ್ನು ದಯಪಾದಿಸಲಿಕ್ಕೆ ಬೇಡಿಕೊಳ್ಳುವೆನು........(ತುಸ ಹೊತ್ತು ಸುಮ್ಮನಿದ್ದು) ನನಗೆ ಇಂತಹ ಬಣ್ಣವನ್ನುಂಟುಮಾಡಿದವರಾರು? ನಾನರಿಯದಾಗಿರುವೆನು! ನಾನು ಕಪ್ಪುಬಣ್ಣದವನಾಗಿರುವದರಿಂದಲೇ, ನಿನ್ನ ಬಿಳಿಯ ಬಣ್ಣಕ್ಕೆ ಮೋಹಗೊಂಡಿದ್ದೇನೆ! ನಿನ್ನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿದ್ದೇನೆ!

(ವಸ್ತ್ರಭೂಷಣಗಳಿಂದಲಂಕೃತನಾದ ವೃತ್ರಾಸುರನು ಪ್ರವೇಶಿಸುವನು. ಸೂರ್ಯೆಯು ವೃತ್ರಾಸುರನನ್ನು ನೋಡಿ ಭಯದಿಂದ ಚೀತ್ಕಾರಮಾಡಿ ಮೋರೆಯನ್ನು ಮುಚ್ಚಿಕೊಳ್ಳುವಳು.)

ವೃತ್ರಾಸುರ:—ಒಳ್ಳೇ ಚಮತ್ಕಾರಿಕವಾದ ರೂಪ!............ (ಬಲಾಸುರನನ್ನುದ್ದೇಶಿಸಿ) ಎಲೊ, ಮೂರ್ಖನೆ, ಯಾರನ್ನು ಪ್ರೀತಿಸಿರುವೆ? ಪ್ರಾಣಕ್ಕಿಂತಲೂ ಹೆಚ್ಚಾಗಿಯೆ ಪ್ರೀತಿಸಿರುವೆಯಾ? ಒಳಿತು ಮಾಡಿರುವೆ! ಅವಳು ದೇವತೆಗಳ ಮಗಳು! ನೀನು ಅಸುರನು! (ಬಲಾಸುರನು ನಾಚುಗೆ ಯಿಂದ ಸುಮ್ಮನಿರುವನು)ದೇವತೆಗಳು ನಮ್ಮನ್ನು ತಿರಸ್ಕರಿಸುತ್ತಿರುವರು. ಹೇಯದೃಷ್ಟಿಯಿಂದ ನೋಡುತ್ತಿರುವರು. ಯಾಕೆಂಬುದನ್ನು ನೀನು ಬಲ್ಲೆಯಾ? ಅವರ ಮೈದೊಗಲು ಹಾಲಿನಂತೆ ಬಿಳಿಯುಬಣ್ಣದ್ದು. ನಮ್ಮದು ಕಪ್ಪು. ಅಂತೆಯೇ ಅವರು ನಮ್ಮನ್ನು ಹೀಯಾಳಿಸುತ್ತಾರೆ! ಅವರು ಸುಧಾರಿಸಿದವರಂತೆ. ನಾವು ಕಾಡು ಜನರಂತೆ. ಅವರು ಆರ್ಯ ರಂತೆ. ನಾವು ಅನಾರ್ಯರಂತೆ. ಅವರು ದೇವತೆಗಳಂತೆ. ನಾವು ದಸ್ಯುಗಳಂತೆ. ಅವರು ನಮ್ಮೊಡನೆ ಕೂಡಿ ವ್ಯವಹರಿಸಲೊಲ್ಲರು. ಸ್ನೇಹದ ಬಳಿಕೆಯನ್ನಿಡಲೊಲ್ಲರು. ಶರೀರ ಸಂಬಂಧವನ್ನು ಮಾಡಬ ಯಿಸರು. ನಾವು ನಮ್ಮ ರೂಪದಿಂದಲೂ, ಬಣ್ಣದಿಂದಲೂ ಸೃಷ್ಟಿಯ ಶೋಭೆಯನ್ನು ಹಾಳು ಮಾಡಿರುವೆವಂತೆ! ಆದುದರಿಂದ ಅವರು ನಮ್ಮನ್ನು ನಾಶಮಾಡಬಯಿಸಿದ್ದಾರೆ! ನಮ್ಮೊಡನೆ ಯುದ್ಧ ಮಾಡುತ್ತಿ ದ್ದಾರೆ. ಮನೆ-ಮಾರುಗಳನ್ನು ಹಾಳು ಮಾಡುತ್ತಿದ್ದಾರೆ. ಶಿಶುಗಳ ಹತ್ಯೆಯನ್ನು ನಡಿಸಿದ್ದಾರೆ. ಅವರು ನಮ್ಮನ್ನು ಯುದ್ಧದಲ್ಲಿ ಸೋಲಿಸಿ ತಮ್ಮ ಉಪಟಳದಿಂದ ಹಣ್ಣಿಗೆ ತಂದು ದಾಸಾನುದಾಸರನ್ನಾಗಿ ಮಾಡಿ ಕೊಳ್ಳಬೇಕೆಂದಿದ್ದಾರೆ. ನಮಗೆ ಜೀವಿತವು ಬೇಕಿದ್ದರೆ, ಅವರ ವಶ್ಯತೆ ಯನ್ನು ಸ್ವೀಕರಿಸಬೇಕು. ಅವರು ತೋರಿಕೊಟ್ಟ ಸ್ಥಳದಲ್ಲಿ ವಾಸಿಸ ಬೇಕು. ಅವರ ಸೇವೆಯನ್ನು ಮಾಡಿಕೊಂಡಿರಬೇಕು. ನಮ್ಮ ಸ್ಥಿತಿಯು ಹೀಗಾಗುವದು ನಿನಗೆ ಸಮ್ಮತವಿದೆಯೆ? ನೀನು ದೇವತೆಗಳನ್ನು ಓಲೈಸ ಬಯಿಸುವೆಯಾ? ನಾನು ಬೇಡೆನ್ನುವದಿಲ್ಲ. ಹೋಗು. ಈ ಸುಂದ ರಿಯ ಬೆನ್ನುಹತ್ತಿ ಹೋಗು! ತಿರಸ್ಕಾರವನ್ನೂ ಒದಿಕೆಗಳನ್ನೂ ಸಹಿಸಿಕೊಂ

ಡಿದ್ದು ಪ್ರೇಮಯಾಚನೆ ಮಾಡು!

ಬಲಾಸುರ:—ನಾನೊಲ್ಲೆನು. ನನಗೆ ಈ ಸುಂದರಿಯ ಪ್ರೇಮವು ಬೇಕಿಲ್ಲ! ದೇವತೆಗಳ ದಾಸಾನುದಾಸನಾಗುವದು ಬೇಡ! ಆದರೆ ಅಣ್ಣಾ, (ಸೂರ್ಯೆಯನ್ನು ತೋರಿ) ಇವಳನ್ನು ಬಂಧಮುಕ್ತಮಾಡಿ ಬಿಡು! ಅಳುತ್ತಿರುವಳು! ನೋಡಿ ಸಹಿಸಲಾರದವನಾಗಿರುವೆನು! ದಯವಿಟ್ಟು ಇವಳನ್ನು ಬಿಟ್ಟುಕೊಡು............

(ಪ್ರಹರಿಗಳಿಂದ ವೇಷ್ಟಿತನಾದ ದಧೀಚಿಋಷಿಯು ಪ್ರವೇಶಿಸುವನು)

ದಧೀಚಿ:—ಅಸುರ ಸಾರ್ವಭೌಮನೆ, ಬಲಾಸುರನ ಹೇಳಿಕೆಯಂತೆ ಅವಳನ್ನು ಬಿಟ್ಟುಕೊಡು. ನೀನು ನಿನ್ನ ಮಂಗಲವನ್ನು ಬಯಸಿದ್ದರೆ, ಅಸುರ ಕುಲದ ಮಂಗಲಾಪೇಕ್ಷಿಯಾಗಿದ್ದರೆ, ಸೂರ್ಯೆಯನ್ನು ಈಗಿಂದೀಗಲೆ ಸೆರೆಮನೆಯಿಂದ ಬಿಡುಗಡೆ ಮಾಡಲಿಕ್ಕೆ ಬೇಕು.

ಸೂರ್ಯೆ:—(ಮೋರೆದೆರೆದು ನೋಡಿ) ಋಷಿವರ್ಯರೆ, ನನ್ನನ್ನು ಬಂಧಮುಕ್ತಳನ್ನಾಗಿ ಮಾಡಿರಿ! ನನ್ನ ಜೀವವನ್ನು ಬದುಕಿಸಿರಿ! ಇನ್ನು ನಾನು ಈ ಸೆರೆಮನೆಯಲ್ಲಿರಲಾರೆನು!

ವೃತ್ರಾಸುರ:—(ತೀವ್ರ ದೃಷ್ಟಿಯಿಂದ ಋಷಿಯ ಆಪಾದ ಮಸ್ತಕ ನಿರೀಕ್ಷಣೆ ಮಾಡಿ) ಓಹೊ, ಈಗ ಹೊಳೆಯಿತು. ದಧೀಚಿಋಷಿ ಇವನು. ಋಷಿರಾಜನೆ, ನೀನು ಇಲ್ಲಿಗೆ ಬರುವೆಯೆಂದು ನಾನು ಮೊದಲೆ ಊಹಿಸಿದ್ದೆನು; ಹಾಗು ನಿನ್ನ ಮಾರ್ಗಪ್ರತೀಕ್ಷೆ ಮಾಡುತಲಿದ್ದೆನು. ವೃತ್ರಾಸುರನ ಈ ದೈತ್ಯ ನಗರದಲ್ಲಿ ನಿನಗೆ ಸ್ವಾಗತವಿರಲಿ ಕುಶಲನಾಗಿರುವೆಯಷ್ಟೆ? ನಿನ್ನ ಆ ಮಧುವಿದ್ಯೆಯು ಬಲಶಾಲಿಯಾಗಿದೆಯಷ್ಟೆ? ನಿನ್ನ ಆ ಶಿಷ್ಯದ್ವಯರೆಲ್ಲಿ? ನನಗೆ ಅವರೂ ಬೇಕಿದ್ದರು. ಮಧುವಿದ್ಯೆಯ ಪ್ರಭಾವದಿಂದ ಸತ್ತ ಮನುಷ್ಯರನ್ನು ಪುನರ್ಜೀವನಗೊಳಿಸಲಿಕ್ಕೆ ಬರುತ್ತಿದೆಯಷ್ಟೆ? ಹೀಗೆಯೆ ಜೀವಿಸಿದ್ದ ಮನುಷ್ಯರನ್ನು ಸಾಯಹೊಡೆಯಲಿಕ್ಕೂ ಬರುತ್ತಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ?

ದಧೀಚಿ:—ಮದಾಂಧನೆ, ಅಸಂಭವವಲ್ಲ! ಯಾವ ದಿವಸ ನಿನ್ನ ಅತ್ಯಾಚಾರವು ಮೇರೆ ಮೀರಿ ಹೋಗುವದೋ ಅದೇ ದಿವಸ ನನ್ನ ಮಧು ವಿದ್ಯೆಯಲ್ಲಿ ಜೀವಿಸಿರುವವರನ್ನು ಕೊಲ್ಲುವ ಶಕ್ತಿಯುಂಟಾಗುವದು! ಇರಲಿ. ಈಗ ನೀನು ಮಂಗಲಾಕಾಂಕ್ಷಿಯಾಗಿದ್ದರೆ ಸೂರ್ಯೆಯನ್ನು ಬಂಧಮುಕ್ತಳನ್ನಾಗಿ ಮಾಡಿಬಿಡು........

ವೃತ್ರಾಸುರ:—ಮಂಗಲ ಮಂಗಲವೆಂದು ಬಹಳವಾಗಿ ಉಚ್ಚರಿಸುತ್ತಿರುವೆ! ಮಂಗಲವೆಂದರೇನು?

ದಧೀಚಿ:—ಮಂಗಲವೆಂದರೆ ಸೂರ್ಯನ ಬೆಳಕು. ಮೂರ್ಖನೇ, ನೀನಾವಳನ್ನು ಸೆರೆಯಲ್ಲಿರಿಸಿರುವೆಯೆಂಬುದನ್ನು ಬಲ್ಲೆಯಾ?

ವೃತ್ರಾಸುರ:—ಸೂರ್ಯನ ಬೆಳಕು ಅಸುರರಿಗಷ್ಟೆ ಪ್ರಯೋಜನೀಯುವೆ? ದೇವತೆಗಳಿಗೆ ಅನಾವಶ್ಯಕವೆ?

ದಧೀಚಿ:—ದೈತ್ಯರಾಜನೆ, ನಿನ್ನ ಈ ಉದ್ದಾಮ ವರ್ತನದಿಂದ ಪೃಥ್ವಿಯು ರಸಾತಳಕ್ಕಿಳಿದು ಹೋಗುವದು!............

ವೃತ್ರಾಸುರ:—ದೋಷವೇನು? ರಸಾತಳದಲ್ಲೂ ನಾವೀರ್ವರು ಕಲೆಯುವೆವು! ದೈತ್ಯರೊಡನೆ ದೇವತೆಗಳೂ ರಸಾತಳಕ್ಕಿಳಿಯಬೇಕಷ್ಟೆ?

ದಧೀಚಿ:—ನೀನು ಸೂರ್ಯೆಯನ್ನು ಬಿಟ್ಟುಕೊಡಲಿಕ್ಕೆ ಸಮ್ಮತಿಸುವದಿಲ್ಲವೆ?

ವೃತ್ರಾಸುರ:—ನಿನಗೆ ಹೀಗೆ ಹೇಳಿದವರಾರು? ಸೂರ್ಯೆಯ ಮುಕ್ತತೆಯ ವಿಷಯದಲ್ಲಿ ನಾನು ನನ್ನ ಸಂಪೂರ್ಣ ಅನುಮತಿಯನ್ನೀಯುವೆನು.

ದಧೀಚಿ:—ಹೀಗಿದ್ದರೆ, ಅವಳನ್ನು ಬೇಗನೆ ಬಿಟ್ಟುಕೊಡು.

ವೃತ್ರಾಸುರ:—ಸೂರ್ಯೆಯನ್ನು ಸೆರೆಮನೆಯಿಂದ ಬಿಟ್ಟುಕೊಡುವ ಮೊದಲು ನಾನೊಂದು ಕಥೆಯ ಹೇಳುವೆನು; ಕೇಳಿಕೊಳ್ಳು. ಪುಲೋಮನನೆಂಬ ಹೆಸರಿನ ದೈತ್ಯರಾಜನೊಬ್ಬನಿದ್ದನು............

ದಧೀಚಿ:— ಇದು ಕಥೆಯೆ? ಕಥೆಯಲ್ಲ-ಇತಿಹಾಸ. ನೀನು ಪುಲೋಮನನನ್ನು ನಿನ್ನ ಕೈಯಿಂದ ವಧಿಸಿರುವೆ!

ವೃತ್ರಾಸುರ:—ಅಲ್ಲವೆಂದೆನ್ನುವರಾರು? ದೈತ್ಯಸಾರ್ವಭೌಮನಾಗಿದ್ದ ಪುಲೋಮನನನ್ನು ವಧಿಸಿ, ನಾನು ದಾನವ ಚಕ್ರವರ್ತಿಯಾಗಿರುವದು ಸರ್ವಶ್ರುತವಾಗಿದೆ; ಆದರೆ ನಾನು ಪುಲೋಮನನನ್ನು ಏಕೆ ಕೊಂದೆನೆಂಬದರ ಕಾರಣವನ್ನು ಹೇಳುವವನಿರುವೆನು; ಕೇಳಿಕೊಳ್ಳು. ಪುಲೋಮನನಿಗೆ ಒಬ್ಬ ಮಗಳಿದ್ದಳು. ಅಪರೂಪ ರೂಪಸಿಯಾಗಿದ್ದಳು. ದೇವತೆಗಳ ಕಣ್ಣುಗಳನ್ನು ಸಹ ಕುಕ್ಕಿಸುವ ಈ ರೂಪಸಿಯು ದಾನವಕುಲದಲ್ಲಿ ಹೇಗೆ ಜನಿಸಿರಬಹುದೆಂದು ನಾನು ಬಹಳವಾಗಿ ಭಾವಿಸಿದೆನು. ಭಾವಿಸಿ, ಭಾವಿಸಿ, ವಿಚಾರಪ್ರವಾಹವು ಮುಂದೆ ಸಾಗದಂತಾಗಲು, ಮದಿರೆಯನ್ನು ಸೇವಿಸಿ ಹೊಸ ಮನುಷ್ಯನಾಗಿ ಪುತ್ತೆ ಯೋಚಿಸುತ್ತಿದ್ದೆನು. ಹೀಗೆ ಎಷ್ಟೆ ಯೋಚಿಸಿದರೂ ನಾನು ಸರಿಯಾದ ಉತ್ತರವನ್ನು ಕಾಣದೆ ಆಶ್ಚರ್ಯಚಕಿತನಾಗಿ ಹೋಗುತ್ತಿದ್ದೆನು. ಅವಳ ಮೈಬಣ್ಣದಲ್ಲಿ ಸಮುದ್ರಜಲದ ತರಲ ನೀಲವರ್ಣದ ಛಾಯೆಯಿತ್ತು. ಅವಳ ಮುಖದಲ್ಲಿ ಹುಣ್ಣಿವೆಯ ಚಂದ್ರಮನ ಕಾಂತಿಯೂ, ಮನೋಹರತೆಯೂ ಇತ್ತು. ಅವಳ ಕಣ್ಣುಗಳಲ್ಲಿ ನಕ್ಷತ್ರಗಳ ಉಜ್ವಲತೆಯಿತ್ತು. ನಾನು ಆ ಅಪರೂಪ ರೂಪೆಯನ್ನು ಹಲವು ಬಾರಿ ಪ್ರತ್ಯಕ್ಷ ಕಂಡಿದ್ದೆನಲ್ಲದೆ, ಎಷ್ಟೋ ಸಾರೆ ಕನಸಿನಲ್ಲೂ ನೋಡಿದ್ದೆನು. ಇನ್ನೂ ನೋಡುತ್ತಿರುವೆನು.

ದಧೀಚಿ:—ನಿನ್ನ ಆ ಸುಖ ಸ್ವಪ್ನವು ಹಾಳಾಗಿ ಹೋಗಿಲ್ಲವೆ? ಈಗಳೂ ಕಣ್ಣಿಗೆ ಬೀಳುತ್ತಿದೆಯೆ? ಅನುಚಿತವೇ ಸರಿ! ದೈತ್ಯರಾಜನೇ, ನೀನಾವದಿನ ಆ ಸುಂದರಿಯ ತಂದೆಯನ್ನು-ನಿನ್ನ ತಂದೆಯೋಪಾದಿಯಲ್ಲಿದ್ದ ಆ ವೃದ್ಧರಾಜನನ್ನು-ರಾಕ್ಷಸನಂತೆ ನಿರ್ದಯತೆಯಿಂದ ಸಂಹರಿಸಿದೆಯೋ, ಅಂದೇ ಆ ಸುಂದರಿಯ ಹವ್ಯಾಸವನ್ನು ಬಿಟ್ಟುಕೊಡುವದು ಅಗತ್ಯವಾಗಿತ್ತು!

ವೃತ್ರಾಸುರ:—ಅಂದೇ ಏಕೆ, ಇಂದು ಸಹ ಆ ಆಶೆಯನ್ನು ಬಿಟ್ಟು ಕೊಡಲಾರದವನಾಗಿರುವೆನು ಇರಲಿ. ನನ್ನ ಕತೆಯನ್ನು ಮುಂದೆ ಸಾಗಿಸುವೆನು, ಕೇಳು. ನಾನು ಒಮ್ಮೆ ಪುಲೋಮನ ಬಳಿಗೆ ಹೋಗಿದ್ದೆನು. ಆ ಸಮಯದಲ್ಲಿ ಪುಲೋಮನನು ನನ್ನನ್ನು ಅಣಕಿಸುವ ಉದ್ದೇಶದಿಂದ ನುಡಿದದ್ದೇನಂದರೆ: 'ನನ್ನ ಮಗಳು ದೇವಾಂಗನೆಯರಂತೆ ರೂಪವತಿಯಾಗಿದ್ದಾಳೆ ನಾನು ನನ್ನ ಈ ಮಗಳನ್ನು ದೇವತೆಗಳಿಗೆ ಕೊಟ್ಟು ಲಗ್ನ ಮಾಡುವೆನು.' ಅವನು ತನ್ನ ಈ ಮನೋಭಿಲಾಷೆಯನ್ನು ಪೂರ್ಣ ಮಾಡಿಕೊಳ್ಳುವದಕ್ಕಾಗಿ ಮಗಳು ಉಪವರಳಾಗಿರದಿದ್ದರೂ ಅವಸರಕ್ಕೊಳಗಾಗಿ ಒಬ್ಬ ಋಷಿಯನ್ನು ಕರೆತಂದನು. ಪೂಜಿಸಿದನು. ದೇವತೆಗಳೊಡನೆ ಶರೀರ ಸಂಬಂಧವನ್ನು ಬಳಿಸುವ ತನ್ನ ಸಂಕಲ್ಪಕ್ಕೆ ಸಹಾಯ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಆ ಋಷಿಯು ಪುರೋಹಿತನಾಗಲಿಕ್ಕೆ ಸಂತೋಷದಿಂದ ಒಪ್ಪಿಕೊಂಡನು. ಆ ಋಷಿಯು ಯಾವನೆಂಬದನ್ನು ನೀನು ಬಲ್ಲೆಯಾ? ನಾನವನನ್ನು ಚನ್ನಾಗಿ ನೋಡಿಟ್ಟಿರುವೆನು. ಅವನ ಹೆಸರೇನು........ (ಗೇನಿಸಿದಂತೆ ಮಾಡಿ) ಹಾ, ಹೊಳೆಯಿತು. ಆ ಋಷಿಯ ಹೆಸರು ದಧೀಚಿ. ನಾನು ಹೇಳಿದ್ದು ನಿಜವಷ್ಟೆ?

ದಧೀಚಿ:—ನಿಜ. ನಾನೇ ಆ ದಧೀಚಿ ಋಷಿ. ದೇವ-ದಾನವರಲ್ಲಿ ಐಕ್ಯವನ್ನುಂಟು ಮಾಡಬೇಕೆಂದು ಆಶಿಸಿದ ಪುಲೋಮನನ ಮಗಳ ವಿವಾಹದಲ್ಲಿ ಪುರೋಹಿತನಾಗುವದು ಗೌರವದ ಸಂಗತಿಯೆಂದೇ ನಾನು ಭಾವಿಸಿದ್ದೆನು. ಈಗಲೂ ಭಾವಿಸಿರುವೆನು........ನೀನು ಮಾಡಿದ್ದೇನು? ಪುಲೋಮನನ ವಧದಿಂದ ದೇವ-ದಾನವರಿಗೆ ಭಯಂಕರ ಹಾನಿಯನ್ನುಂಟುಮಾಡಿರುವೆ? ನಿನ್ನ ಈ ಕೃತಿಯಿಂದ ದೇವ-ದಾನವರ ಒಕ್ಕಟ್ಟು ಅಸಂಭವನೀಯವಾಗಿ ಹೋಗಿದೆ. ಈ ಅಪವಾದವನ್ನು ನೀನೇಕೆ ಹೊರಬೇಕಿತ್ತು? ದೇವ-ದಾನವರ ಮಿಲನಮಾಲೆಯನ್ನು ನಿರ್ದಯತೆಯಿಂದ ಹರಿದು ಬಿಸಾಟಿ, ಚಿರಕಾಲಿಕ ಅಪವಾದದ ಹೊರೆಯನ್ನೇಕೆ ಹೊತ್ತುಕೊಂಡೆ?

ವೃತ್ರಾಸುರ:--ನಾನು ಸ್ವಸಂತೋಷದಿಂದ ಆ ಅಪಕೀರ್ತಿಯನ್ನು ಹೊತ್ತುಕೊಂಡಿರುವೆನು. ಇದಕ್ಕಾಗಿ ನನಗೆ ಕೊಂಚವೂ ವಿಷಾದವಿಲ್ಲ; ಆದರೆ ನೀನು ಆ ಪ್ರಸಂಗದಲ್ಲಿ ಯಾವ ಅನುಚಿತ ಕೆಲಸವನ್ನೂ ಮಾಡಲಿಲ್ಲವೆ? ಒಳ್ಳೆ ಸಾತ್ವಿಕನು ನೀನು! ಅಸುರನ ಕನ್ಯೆಯು ದೇವತೆಗಳ ವೈಬಣ್ಣಕ್ಕೆ ಮರುಳಾಗಿ ಕುಲತ್ಯಾಗ ಮಾಡಿದವಳಲ್ಲ! ನೀನವಳನ್ನು ಬಲಾತ್ಕಾರದಿಂದ ಬಂಧಿನಿಯನ್ನಾಗಿ ಮಾಡಿ ಕರೆದೊಯ್ದಿರುವೆ! ಅಡಗಿಸಿಟ್ಟಿರುವೆ!

ದಧೀಚಿ:— ನಾನವಳನ್ನು ಬಂದಿನಿಯನ್ನಾಗಿ ಮಾಡಿಕೊಂಡೊಯ್ದೆನೆ? ಸುಳ್ಳು! ನೀನು ಪುಲೋಮನನನ್ನು ಸಂಹರಿಸಿದ ಸಮಯದಲ್ಲಿ ನಾನು ಅಂತಃಪುರದಲ್ಲಿದ್ದೆನು. ಮಾತೃಹೀನೆಯಾಗಿದ್ದ ಪೌಲೋಮಿಯು ಪಿತೃಹೀನೆಯೂ ಆಗಿ ಅನಾಥೆಯಾದುದನ್ನು ಭಾವಿಸಿ, ನಾನವಳನ್ನು ನನ್ನ ಆಶ್ರಮಕ್ಕೆ ಕರೆದುಕೊಂಡು ಹೋದೆನು.

ವೃತ್ರಾಸುರ:—ಪೌಲೋಮಿಯೊಡನೆ ಆಶ್ರಮಕ್ಕೆ ಓಡಿಹೋದೆಯಷ್ಟೆ? ಮುಂದೇನು ಮಾಡಿದೆ?............

ದಧೀಚಿ:—ಮಗಳಂತೆ ಭಾವಿಸಿ, ಅವಳ ಸಂರಕ್ಷಣೆ ಮಾಡುತ್ತಿರುವೆನು. ಅವಳಿಗೆ ವೇದಗಳನ್ನು ಕಲಿಸಿರುವೆನು ಧನುರ್ವಿದ್ಯೆಯನ್ನು ಕಲಿಸಿರುವೆನು.............

ವೃತ್ರಾಸುರ:—ನಿನ್ನ ಆ ಮಧುವಿದ್ಯೆಯನ್ನು?

ದಧೀಚಿ:—ಆವಶ್ಯಕವೆನಿಸಿದರೆ, ಇದನ್ನೂ ಕಲಿಸುವೆನು.

ವೃತ್ರಾಸುರ:—ಕಲಿಸುವದು ಬೇಡ. ನೀನು ಹೇಗಿದ್ದರೂ ಅವಳ ಪಾಲಕ ಪಿತನು. ಅವಳನ್ನು ನನಗೆ ಕೊಟ್ಟು ಲಗ್ನ ಮಾಡು. ಮಧುವಿದ್ಯೆಯನ್ನು ವರದಕ್ಷಿಣೆಯಾಗಿ ಕೊಟ್ಟು ಬಿಡು. ಏಕೆ, ನಾನು ಹೇಳಿದ್ದು ನಿನಗೆ ಸಮ್ಮತವಷ್ಟೆ?............

ದಧೀಚಿ:—ಅವಳ ಸಂಗಡ ನಿನ್ನ ವಿವಾಹವೆ?

ವೃತ್ರಾಸುರ:—ಏಕೆ, ಏಕಾಗಕೂಡದು? ಅವಳು ದೈತ್ಯಳು,

ನಾನೂ ವೈಶ್ಯನು. ವಿವಾಹಕ್ಕೆ ಅಡ್ಡಿಯೇನು?

ದಧೀಚಿ:—ಈ ವಿವಾಹಕ್ಕೆ ನಾನೆಂದೂ ಸಮ್ಮತಿಸಲಾರೆನು!

ವೃತ್ರಾಸುರ:—ಏಕೆ?

ದಧೀಚಿ:—ನೀನು ಅವಳ ತಂದೆಯ ಕೊಲೆಗಡಕನು!

ವೃತ್ರಾಸುರ:—ಅವಳು ಈ ಸಂಗತಿಯನ್ನರಿಯಳು............

ದಧೀಚಿ:—ಅವಳು ಅರಿಯದಿದ್ದರೆ, ನಾನು ಹೇಳುವೆನು. ಅವಳಿಗೆ ಗೊತ್ತಾಗುವಂತೆ ಮಾಡುವೆನು.

ವೃತ್ರಾಸುರ:—ಇನ್ನು ನಿನಗೆ ಆ ಸುಯೋಗವು ಸಿಗದು. ನೀನು ಈಗ ನಮ್ಮೀರ್ವರ ವಿವಾಹಕ್ಕೆ ಸಮ್ಮತಿಗೊಡಬೇಕು; ಇಲ್ಲವೆ ಮರಣಕ್ಕೆ ಸಿದ್ಧನಾಗಬೇಕು.

ದಧೀಚಿ:—ನಾನು ಸಮ್ಮತಿಗೊಟ್ಟರೂ ಅವಳು ನಿನ್ನನ್ನು ವರಿಸಳು. ಯಾಕೆಂದರೆ ಅವಳು ನನ್ನ ಶಿಕ್ಷಣದಲ್ಲಿ ಬೆಳೆದವಳ:...........

ವೃತ್ರಾಸುರ:—ಈ ಅವಧಿಯಲ್ಲಿ ಬಹು ಬಾರಿ ಅವಳ ಗುಪ್ತ ದರ್ಶನ ತಕ್ಕೊಂಡಿರುವೆನು; ಆದರೆ ಮದುವೆಯ ಮಾತೆತ್ತಿಲ್ಲ. ಯಾಕೆಂದರೆ, ಅವಳು ಸಣ್ಣಪುಟ್ಟ ಕೆಲಸಗಳಲ್ಲಿ ಸಹ ನಿನ್ನ ಅನುಮತಿಯ ಆಶೆಯಯನ್ನಿಟ್ಟುಕೊಂಡಿರುವಳು ಅಂದ ಬಳಿಕ ಅವಳು ನಿನ್ನ ಅನುಜ್ಞೆಯನ್ನು ಪಡೆಯದೆ, ನನ್ನ ಸಂಗಡ ವಿವಾಹ ಮಾಡಿಕೊಳ್ಳಲಿಕ್ಕೆ ಸಮ್ಮತಿಸಳೆಂಬುದು ಸಹಜವಾದ್ದು. ಕಾರಣ ನಾನೀಗ ನಿನ್ನ ಸಮ್ಮತಿಗೆ ಉತ್ಸುಕನಾಗಿರುವೆನು.

ದಧೀಚಿ:—ನನಗೆ ನಿನ್ನ ಈ ಬಡಂಬಡಿಕೆಯನ್ನು ಕೇಳಿಕೊಳ್ಳುವದು ಬೇಕಾಗಿಲ್ಲ. ನೀನು ಸೂರ್ಯನನ್ನು ಬಂಧಮುಕ್ತಳನ್ನಾಗಿ ಮಾಡುವೆಯೊ ಇಲ್ಲವೊ ಎಂಬುದನ್ನು ಮಾತ್ರ ಹೇಳು.

ವೃತ್ರಾಸುರ:—ಋಷಿರಾಜನೆ, ನನಗೂ ನಿನ್ನ ಬಡಂಬಡಿಕೆಯ ಮಾತು ಬೇಡಾಗಿದೆ. ನೀನು ಅವಳೊಡನೆ ಆಗಬೇಕಿದ್ದ ನನ್ನ ವಿವಾ

ಹಕ್ಕೆ ಸಮ್ಮತಿಸುವೆಯೊ ಇಲ್ಲವೊ ಎಂಬುದನ್ನು ಮಾತ್ರ ಹೇಳು. ಸೂರ್ಯೆಯ ಬಂಧಮುಕ್ತತೆಯೂ, ನಿನ್ನ ಜೀವನ-ಮರಣಗಳೂ ನೀನು ಕೊಡಬೇಕಾಗಿದ್ದ ಉತ್ತರವನ್ನವಲಂಬಿಸಿವೆಯೆಂಬುದನ್ನು ಲಕ್ಷ್ಯದಲ್ಲಿ ತಂದು ಸರಿಯಾಗಿ ಉತ್ತರ ಹೇಳು.

ದಧೀಚಿ:—ಹೇಗೊ?

ವೃತ್ರಾಸುರ:—ಅಹುದು ಸ್ವಾಮಿಾ!

ದಧೀಚಿ:—ನಾನು ಉತ್ತರವನ್ನು ಕೊಡಲೇ ಬೇಕೆ?

ವೃತ್ರಾಸುರ:—ಅಹುದು.

ದಧೀಚಿ:—ನಾನು ಸಮ್ಮತಿಸಲಾರೆನು!

ಸೂರ್ಯೆ:—ಋಷಿವರ್ಯರೆ, ಅಸುರನ ಕೋಪಕ್ಕೆ ಗುರಿಯಾಗ ಬೇಡಿರಿ!

ದಧೀಚಿ:—ದೈತ್ಯರಾಜನೆ, ಏನಾದರೂ ನಾನು ಈ ವಿವಾಹಕ್ಕೆ ಅನುಮತಿಸಲಾರೆನು!

ವೃತ್ರಾಸುರ:—(ಸೂರ್ಯೆಯ ಕಡೆಗೆ ನೋಡಿ) ಸುಂದರಿ, ಭಯಗೊಳ್ಳದಿರು. ಋಷಿವರ್ಯನು ಈಗ ಕೊಟ್ಟಿರುವ ಉತ್ತರವು ನಿಶ್ಚಯಾತ್ಮಕವಲ್ಲ-ಅನಿಶ್ಚಿತವಾದ್ದು. ಇನ್ನು ಅಲ್ಪಾವಧಿಯಲ್ಲಿಯೆ ಸಮ್ಮತಿಸೂಚಕ ನಿಶ್ಚಿತ ಉತ್ತರವನ್ನು ಕೊಡತಕ್ಕವನಿರುವನು. ಋಷಿವರ್ಯನೆ, ವಿಳಂಬವೇಕೆ? ಬೇಗನೆ ಅನುಮತಿಸೂಚಕ ಉತ್ತರ ಕೊಟ್ಟು ಬಿಡು

ದಧೀಚಿ:—ದೈತ್ಯರಾಜನೆ, ಋಷಿಯ ವಚನವದು. ಕಾಲಚಕ್ರದಲ್ಲಿ ಸಿಕ್ಕು ಹೊರಳತಕ್ಕದ್ದಲ್ಲ ಪರಿಸ್ಥಿತಿಯ ಇರುಕಿನಲ್ಲಿ ಸಿಕ್ಕು ರೂಪಾಂತರಗೊಳ್ಳತಕ್ಕದ್ದಲ್ಲ. ನೀನೆಷ್ಟು ಸಲ ಕೇಳಿದರೂ ನಾನು ನಕಾರಾರ್ಥಕ ಉತ್ತರವನ್ನೇ ಕೊಡತಕ್ಕವನು

ವೃತ್ರಾಸುರ:—ಬಲಾಸುರ.

ಬಲಾಸುರ:—ಅಣ್ಣಾ, ಅಪ್ಪಣೆಯಾಗಲಿ.

ವೃತ್ರಾಸುರ:—ನೀನು ಈ ಸುಂದರಿಯ ಬಂಧಮುಕ್ತತೆಯನ್ನು ಅಪೇಕ್ಷಿಸುತ್ತಿರುವೆಯಷ್ಟೆ?

ಬಲಾಸುರ:—ಮನಃಪೂರ್ವಕವಾಗಿಯೂ ನಾನು ಹೀಗೆ ಆಶಿಸುತ್ತಿರುವೆನು.

ವೃತ್ರಾಸುರ:—ನಾನು ನಿನ್ನ ಕೋರಿಕೆಯನ್ನು ಕೊನೆಗಾಣಿಸುವೆನು

ಬಲಾಸುರ:—(ಸೂರ್ಯೆಯು ಕಡೆಗೆ ನೋಡಿ) ಬೆಳಕಿನ ಮಗಳೇ, ಅಳದಿರು. ಅಣ್ಣನು ನಿನ್ನನ್ನು ಬಂಧನದಿಂದ ಬಿಡುಗಡೆಮಾಡಕಕ್ಕನನಿರುವನು. ಇನ್ನೇಕೆ ಅಳುವೆ?

ವೃತ್ರಾಸುರ:—ಈ ಸುಂದರಿಯು ಬಿಡುಗಡೆಯ ಮೊದಲು ನಾನು ನಿನಗೊಂದು ಅಪ್ಪಣೆಯ ಮಾಡುವೆನು. ನೀನು ನನ್ನ ಅಪ್ಪಣೆಯನ್ನು ಕಾಲವಿಲಂಬ ಮಾಡದೆ ಸರಿಯಾಗಿ ಪಾಲಿಸಲಿಕ್ಕೆ ಬೇಕು. ತಿಳಿಯಿತೆ?

ಬಲಾಸುರ:—ಅವಶ್ಯವಾಗಿ ಪಾಲಿಸುವೆನು.

ವೃತ್ರಾಸುರ:—ಅಗೊ, ಅಲ್ಲಿ ಕಬ್ಬಿಣದ ಮೊಳೆಗಳಿವೆ. ಸುತ್ತಿಗೆಯಿದೆ. ತಕ್ಕೊ. ನಾನು ಒಬ್ಬ ಮನುಷ್ಯನನ್ನು ತೋರುವೆನು. ಮೊದಲು ಅವನ ಬಲಗೈಯನ್ನು ಕೋಟೆಯ ಗೋಡೆಯ ಮೇಲಿರಿಸಿ ಮೊಳೆಯನ್ನು ಜಡಿಯಬೇಕು ಬಳಿಕ ಎಡಗೈಯನ್ನಿರಿಸಿ ಮೊಳೆ ಹೊಡೆಯಬೇಕು. ತರುವಾಯ ಎರಡೂ ಕಾಲುಗಳಲ್ಲಿ ಮೊಳೆಗಳನ್ನು ಸೇರಿಸಬೇಕು. ನಾನು ಹೇಳಿದ್ದು ಚನ್ನಾಗಿ ತಿಳಿಯಿತೆ?

ಸೂರ್ಯೆ:—ಅಯ್ಯೊ, ಎಂತಹ ಭಯಂಕರ ಶಿಕ್ಷೆಯಿದು! ನಾವಿದನ್ನು ಹೇಗೆ ನೋಡಲಿ? ಹೇಗೆ ಸಹಿಸಲಿ? ನನ್ನಿಂದ ಸಹಿಸಲಿಕ್ಕಾಗದು! (ಮೂರ್ಛಿತಳಾಗಿ ಬೀಳುವಳು.)

ದಧೀಚಿ:—ಬೆದರಬೇಡ. ಏನಾದರೂ ಹೆದರಬೇಡ. (ಸೂರ್ಯೆಯ ಕಡೆಗೆ ಹೋಗ ಹತ್ತಿದನು. ಬಲಾಸುರನು ಕಳವಳದಿಂದ ನೋಡಹತ್ತಿದನು.)

ವೃತ್ರಾಸುರ:—ನಾನು ಅವಳಿಗೆ ಶಿಕ್ಷೆ ವಿಧಿಸಲಿಲ್ಲ. ಇವನಿಗೆ—

(ದಧೀಚಿಯನ್ನು ತೋರಿಸುವನು )

(ಬಲಾಸುರನು ದಧೀಚಿಯನ್ನು ಹಿಡಿದೊಯ್ಯುವನು. ಕೋಟೆಯ ಗೋಡೆಯ ಮೇಲೆ ಕೈಯಿರಿಸಿ ಮೊಳೆಯನ್ನು ಜಡಿಯುವನು. ರಕ್ತವು ಹೊರಚಿಮ್ಮಹತ್ತುವದು. ದಧೀಚಿಯು ಕ್ಷೀಣ ಆರ್ತಸ್ವರವನ್ನು ಮಾಡುವನು.)

ವೃತ್ರಾಸುರ:—ಋಷಿವರ್ಯನೆ, ಮತ್ತೆ ಕೇಳುವೆನು. ಈಗಲಾದರೂ ಸಮ್ಮತಿಯನ್ನು ಕೊಡಬಹುದಷ್ಟೆ?

ದಧೀಚಿ:—ಇಲ್ಲ.

ವೃತ್ರಾಸುರ:—ಶಿಷ್ಯಾ, ಎಡಗೈಯ ಮೇಲೆ ಪ್ರಯೋಗವಾಗಲಿ! (ಬಲಾಸುರನು ಹೀಗೆ ಮಾಡುವನು.)ಋಷಿವರ್ಯನೆ, ಈಗ ಏನೆಂದು ಹೇಳುವೆ?

ದಧೀಚಿ:—ಈಗಲೂ ಹಾಗೆಯೆ ಹೇಳುವೆನು

ವೃತ್ರಾಸುರ:—ಈ ಸ್ಥಿತಿಯಲ್ಲೂ ನೀನು ಸಮ್ಮತಿಯನ್ನು ಕೊಡಲಾರೆಯಾ?

ದಧೀಚಿ:—ಇಲ್ಲ-ಕೊಡಲಾರೆನು!

ವೃತ್ರಾಸುರ:—(ಆತ್ಮಗತಂ) ಏವಾಹದ ಸಮ್ಮತಿಯು ಬೇಕೇ ಬೇಕು! ದೊರಕಿಸುವದು ಅಸಂಭವವಾಗಿ ತೋರುತ್ತಿದೆ! ಇನ್ನು ಏನು ಮಾಡಲಿ? ಹೆಚ್ಚಾಗಿ ಶಿಕ್ಷಿಸಲಿಯಾ? ಏನಾದರೂ ಈ ಋಷಿಯು ಹಾದಿಗೆ ಬಾರದವನು! ಅತ್ಯಂತ ಸಹನಶೀಲನಿವನು! ನನ್ನ ಶಿಕ್ಷೆಯು ಇವನ ಮನಸ್ಸಿನ ಮೇಲೆ ಸುಪರಿಣಾಮವನ್ನು ಮಾಡದು! ಕೈಗಳಲ್ಲಿ ಮೊಳೆಗಳು ನಟ್ಟು ಹೋಗಿವೆ! ರಕ್ತದ ಕಾರಂಜಿಯು ಪುಟಿಯುತ್ತಿದೆ! ನಾನೀ ದೃಶ್ಯವನ್ನು ನೋಡಲಾರೆನು! (ಬಲಾಸುರನಿಗೆ ಸನ್ನೆ ಮಾಡಿ ಸೂಚಿಸುವನು. ಬಲಾಸುರನು ಮೊಳೆಗಳನ್ನು ಹಿಂದು ತೆಗೆದು ದಧೀಚಿಯನ್ನು ಎಳೆದೊಯ್ಯುವನು.)ಬಲಾಸುರ-ಬಲಾಸುರ, (ಬಲಾಸುರನು ಮತ್ತೆ ಬರುವನು.)ಸುರೆಯು ಬೇಕು. ಒಳ್ಳೆ ಸುರೆಯು ಬೇಕು. ಇದೇ ಈಗ ತಯಾರಾದ ಸುರೆಯು ಬೇಕು. (ಬಲಾಸುರನು ಹೋಗುವನು.)ಗಡ್ಡೆ ಬೇರುಗಳನ್ನು ತಿಂದಿದ್ದು ತಪಸ್ಸಿನಿಂದ ಕೊರಗಿದ್ದ ಈ

ಋಷಿಯ ದೇಹವು ಪಾಷಾಣನಿರ್ಮಿತವಾಗಿರಬಹುದೆ? ಶುಷ್ಕದೇಹದ ಒಳಭಾಗದಲ್ಲಿದ್ದ ಅಸ್ಥಿಗಳ ಮರೆಯಲ್ಲಿ ಅಂತಹ ತೇಜವೂ ಅಂತಹ ಶಕ್ತಿಯೂ ಅಡಗಿರಬಹುದೆ? ನನ್ನಂತಹ ಕಠೋರ ಹೃದಯನು ಆ ದೃಶ್ಯವನ್ನು ನೋಡಿ ತತ್ತರಿಸಿ ಹೋದೆನು! ಋಷಿಯು ಅದನ್ನು ಹೇಗೆ ಸಹಿಸಿಕೊಂಡಿದ್ದಾನಾದೀತು? (ಮನಸ್ಸಿನ ಹೊಯ್ದಾಟದಿಂದ ಅತ್ತಿತ್ತ ಅಲೆಯುವನು. ತುಸ ಹೊತ್ತಿನ ಮೇಲೆ ಉತ್ತೇಜಿತನಾಗಿ)ಏನಾದರೂ ನನಗೆ ಅವಳು ಬೇಕೇ ಬೇಕು! ಯಾವುದೇ ರೀತಿಯಿಂದಾಗಲಿ ಅವಳು ನನ್ನ ಪಾಣಿಗ್ರಹಣ ಮಾಡುವಂತೆ ಮಾಡಲಿಕ್ಕೆ ಬೇಕು!

(ಅಶ್ವಿನೀ ಕುಮಾರದ್ವಯರು ಬರುವರು. ಒಬ್ಬನ ಹೆಸರು ದಸ್ರ. ಇನ್ನೊಬ್ಬನ ಹೆಸರು ನಾಸತ್ಯ ಇಬ್ಬರೂ ಅವಳಿ-ಜವಳಿ ಸಹೋದರರು. ಏಕ ರೂಪಿಗಳು; ಏಕಾಕಾರರು.)

ಅಶ್ವಿನೀಕುಮಾರರು:—ದೈತ್ಯರಾಜನೆ, ಪೌಲೋಮಿಯು ನಿನ್ನ ಪಾಣಿಗ್ರಹಣವನ್ನೆಂದೂ ಮಾಡಳು! ನೀನವಳನ್ನೆಂದೂ ಹೊಂದಲಾರೆ!

ವೃತ್ರಾಸುರ:—(ಚಮಕಿತನಾಗಿ) ನೀವಾರು? ಓಹೋ, ಅಶ್ವಿನೀ ಕುಮಾರರು. ಬನ್ನಿರಿ. ನಾನು ನಿಮ್ಮ ದಾರಿಯನ್ನೇ ಕಾಯುತ್ತಿದ್ದೆನು. ಎಲ್ಲವೂ ಕುಶಲವೆ? ಸೂರ್ಯೆಯು ಕುಶಲಳಾಗಿದ್ದಾಳೆ ಹುತರ ನಿಶ್ಚಿಂತೆಯಿಂದ ನಿದ್ರಿಸುತ್ತಿರಬಹುದು. ಕೂಗಿ ಎಬ್ಬಿಸಿರಿ.

ಅಶ್ವಿನೀಕುಮಾರರು:—ಸೂರ್ಯೆ, ಸೂರ್ಯೆ.

ಸೂರ್ಯೆ:—(ಮತ್ತೆ ಕಿಡಕಿಯಲ್ಲಿ ಎದ್ದು ನಿಂತು ನೋಡಿ) ನೀವು ಬಂದಿರುವಿರಾ? ಏಕೆ ಬಂದಿರಿ? ಬರಬಾರದಾಗಿತ್ತು! ಬೇಗನೆ ಓಡಿ ಹೋಗಿರಿ! ಪಾರಾಗಿರಿ!

ಅಶ್ವಿನೀಕುಮಾರರು:—(ಸೂರ್ಯೆಯ ಕಡೆಗೆ ಧಾವಿಸ ಹತ್ತಿದರು. ವೃತ್ರಾಸುರನು ಇವರ ಕೈಗಳನ್ನು ಹಿಡಿದು ತಡೆದನು) ಕೈ ಬಿಡು. ಕೈ ಬಿಡು.

ವೃತ್ರಾಸುರ:—ಕೈ ಬಿಡುವದಿಲ್ಲ. ಶಕ್ತಿಯಿದ್ದರೆ ಕೊಸರಿಕೊಳ್ಳಿರಿ.

(ಮತ್ತಷ್ಟು ಕಸುವಿನಿಂದ ಹಿಚುಕುವನು.)

ಅಶ್ವಿನೀಕುಮಾರರು:—ಅಯ್ಯೋ, ತಡೆಯಲಾರೆವು! (ವೃತ್ರಾಸುರನ ಒತ್ತುವಿಕೆಯನ್ನು ತಡೆಯಲಾರದೆ ಮೂರ್ಛೆಹೋಗಿ ಬೀಳುವದರಲ್ಲಿದ್ದರು. ವೃತ್ರಾಸುರನು ಕೈಬಿಟ್ಟು ಕೊಡುವನು.)

ವೃತ್ರಾಸುರ:—ಈ ಕೈಯ ಕಸುವನ್ನು ಕಂಡುಕೊಂಡಿರಾ? ನಾನೀ ಕೈಯಿಂದ ಪಾಷಾಣವನ್ನು ಪುಡಿಪುಡಿಯಾಗಿ ಮಾಡಿರುವೆನು! ತಿಳಿಯಿತೆ?

ಅಶ್ವಿನೀಕುಮಾರರು:—ಮಾಡಿರಬಹುದು?

ವೃತ್ರಾಸುರ:—ನೀವು ಇವಳನ್ನು ಬಂಧನಮುಕ್ತಳನ್ನಾಗಿ ಮಾಡಲಿಕ್ಕೆ ಬಂದಿರುವಿರಷ್ಟೆ? ಮಾಡಿಕೊಳ್ಳಿರಿ! (ಅಶ್ವಿನೀ ಕುಮಾರರು ಕೋಪದಿಂದ ಹಲ್ಲು ತಿನ್ನುವರು) ನೀವು ಮನಃಪೂರ್ವಕವಾಗಿಯೂ ಇವಳನ್ನು ಇಲ್ಲಿಂದ ಪಾರುಮಾಡಬೇಕೆಂದಿರುವಿರಾ? ಸೂರ್ಯದೇವನೆಲ್ಲಿ? ಅವನೇಕೆ ಬರಲಿಲ್ಲ? ಅವನೇ ಬಂದಿದ್ದರೆ ಒಳಿತಾಗುತ್ತಿತ್ತು! ಅವನನ್ನು ಬಿಟ್ಟುಕೊಟ್ಟು ನೀವೇಕೆ ಬಂದಿರಿ? ನೀವು ಇವಳಿಗೆ ಏನಾಗಬೇಕು?

ದಸ್ರ:—ಇವಳು ನಮ್ಮ ಪ್ರಕಾಶಸ್ವರೂಪಳು.

ನಾಸತ್ಯ:—ಇವಳು ನಮ್ಮ ಜೀವನಸ್ವರೂಪಳು.

ವೃತ್ರಾಸುರ:—ನನಗೆ ಹೊಳೆಯಿತು! ನೀವು ಇವಳ ಪ್ರಣಯಿಗಳು! ಅಲ್ಲವೆ? ನೀವು ಇವಳನ್ನು ಪ್ರೀತಿಸಿರುತ್ತಿರುವಿರಾ? ಮನಃಪೂರ್ವಕವಾಗಿಯೂ? ನಿಮ್ಮ ಜೀವಕ್ಕಿಂತಲೂ ಹೆಚ್ಚಾಗಿಯೆ?

ದಸ್ರ:—ಅಹುದು.

ನಾಸತ್ಯ:—ಅಂತೆಯೆ ನಾವು ಇಲ್ಲಿಗೆ ಬಂದಿದ್ದೇವೆ.

ವೃತ್ರಾಸುರ:—ನಾನು ಇವಳನ್ನು ಬಂಧನಮುಕ್ತಳನ್ನಾಗಿ ಮಾಡಿಬಿಟ್ಟು ಕೊಡಬಲ್ಲೆನು; ಆದರೆ ನೀವು ನನ್ನದೊಂದು ಮಾತನ್ನು ನಡಿಸಲಿಕ್ಕೆ ಬೇಕು.........

ಅಶ್ವಿನೀ ಕುಮಾರರು:—ಅದಾವುದು ಹೇಳು?

ವೃತ್ರಾಸುರ:—ನೀವು ನಿಮ್ಮ ಗುರುವಿನ ಸಾಕುಮಗಳಾಗಿದ್ದ ಪೌಲೋಮಿಯನ್ನು ತಂದು ನನ್ನ ಸ್ವಾಧೀನ ಪಡಿಸಬೇಕು.

ಅಶ್ವಿನೀಕುಮಾರರು:—ಶಚಿಯನ್ನೆ?

ವೃತ್ರಾಸುರ:—ಹಾ, ಶಚಿಯನ್ನೇ! ನಾನವಳನ್ನು ಪೌಲೋಮಿಯೆಂದು ಕರೆಯುತ್ತೇನೆ. ನೀವು ನಿಮ್ಮಿಷ್ಟದಂತೆ ಶಚಿಯೆಂದು ಕರೆಯುತ್ತಿರಬಹುದು. ನೀವು ಪೌಲೋಮಿಯನ್ನು ಕರೆತಂದು ನನಗೊಪ್ಪಿಸಿದ ಕೂಡಲೆ, ನಾನು ಸೂರ್ಯೆಯನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ನಿಮ್ಮ ರಥದಲ್ಲಿ ಕುಳ್ಳಿರಿಸಿ ಕಳಿಸುವೆನೆಂದು ವಚನ ಕೊಡುವೆನು........

ಅಶ್ವಿನೀ ಕುಮಾರರು:—ನಿನ್ನ ಈ ಹೀನ ಪ್ರಸ್ತಾಪವನ್ನು ನಾವು ಒಪ್ಪಿಕೊಳ್ಳಲಾರೆವು!

ವೃತ್ರಾಸುರ:—ಹೀಗೊ? ಆಗಲಿ! (ಬಲಾಸುರನು ಮದ್ಯವನ್ನು ತಕ್ಕೊಂಡು ಬರುವನು. ವೃತ್ರಾಸುರನು ತೆಗೆದುಕೊಂಡು ಕುಡಿಯುವನು.) ಉತ್ತಮವಾದ ಮದಿರೆ! ಒಳ್ಳೆ ಸೊಗಸಾಗಿದೆ! ತಮ್ಮಾ, ನಿನ್ನ ಸೇವೆಯಿಂದ ನಾನು ತುಂಬ ಸಂತುಷ್ಟನಾಗಿದ್ದೇನೆ ನಾನು ನಿನ್ನ ಸೇವೆಯ ಪುರಸ್ಕಾರವಾಗಿ ಈ ಬಂದಿನೀ ಕನ್ಯೆಯನ್ನು ನಿನಗರ್ಪಿಸಿದ್ದೇನೆ. ನೀನು ನಿನ್ನ ಇಷ್ಟವಿರುವ ಮೇರೆಗೆ ಉಪಭೋಗ ತೆಗೆದುಕೊಳ್ಳಬಹುದು.

(ಬಲಾಸುರನು ಉಂಟಾದ ಆನಂದವನ್ನು ಮುಖಲಕ್ಷಣದಿಂದ ಸೂಚಿಸುವನು. ಸೂರ್ಯೆಯ ಕಡೆಗೆ ಹೋಗುವನು.)

ವೃತ್ರಾಸುರ:—ಋಷಿಶಿಷ್ಯರೇ, ಇನ್ನು ನನಗೇನು ಮಾಡೆಂದು ಹೇಳುವಿರಿ?

ದಸ್ರ:—(ನಾಸತ್ಯನನ್ನು ಕುರಿತು) ತಮ್ಮಾ, ಜೀವವು ಹೋದರೂ ಚಿಂತೆಯಿಲ್ಲ! ಕೊನೆಯ ಪ್ರಯತ್ನವನ್ನು ಮಾಡಿ ನೋಡೋಣ! (ಇಬ್ಬರೂ ಧನುಷ್ಯಗಳಲ್ಲಿ ಬಾಣವನ್ನು ಹೂಡುವರು.)

ವೃತ್ರಾಸುರ:—(ನಕ್ಕು) ಸ್ವಾಮಿಾ, ನಿಮ್ಮ ಈ ಪ್ರಯತ್ನವು ನಿಷ್ಫಲವಾದದ್ದು! ನಿಮ್ಮ ಬಾಣವು ಪಾಷಾಣ ಸಮಾನವಾದ ನನ್ನ ದೇಹಕ್ಕೆ ಕುಸ ಸಹ ಅಪಾಯುವನ್ನುಂಟು ಮಾಡದು! ನನಗೆ ನಿಮ್ಮ ಬಾಣದ ಹೊಡತದ ಕಾಳಜಿಯಿಲ್ಲ. ಹುಂಬನಾದ ಬಲಾಸುರನು ಸೂರ್ಯೆಯನ್ನು ಬಹಳವಾಗಿ ಗೋಳಿಡಿಸುತ್ತಿರಬಹುದೆಂದು ಬಗೆದು ನಾನು ಚಿಂತಾಕ್ರಾಂತನಾಗಿದ್ದೇನೆ!

ಅಶ್ವಿನೀ ಕುಮಾರರು:—(ದೀನಸ್ವರದಿಂದ) ಸೂರ್ಯೆ, ಸೂರ್ಯೆ!

ಸೂರ್ಯೆ:-ಪ್ರಿಯತಮರೆ, ಪ್ರಿಯತಮರೆ!(ಬಲಾಸುರನು ಸೂರ್ಯೆಯ ಹತ್ತಿರ ಹೋಗುವನು )

ಬಲಾಸುರ:— ಬೆಳಕಿನ ಮಗಳೆ, (ಕೈ ಹಿಡಿದು) ನಿನ್ನ ಕೈಗಳು ಎಷ್ಟು ಮೆತ್ತಗಿವೆಯಲ್ಲ! ಕುಸುಮಗಳಂತೆ ಕೋಮಲವಾಗಿವೆ!

ಅಶ್ವಿನೀ ಕುಮಾರರು:— (ವೃತ್ರಾಸುರನ ಬಳಿಯಲ್ಲಿ ಮೊಳಕಾಲೂರಿ ಕುಳಿತು ಕೈ ಜೋಡಿಸಿ) ದೈತ್ಯರಾಜನೆ, ದಯೆ‥ೋರು!

ವೃತ್ರಾಸುರ:— ಸ್ವಾಮಿಾ, ದಯೆಯ ಮಾತು ಈಗ ನೆನಪಾಯಿತೆ? (ಉಪಹಾಸ ಮಾಡುವನು. ಅಶ್ವಿನೀ ಕುಮಾರರು ಕ್ರೋಧದಿಂದಲೂ, ಕ್ಷೋಭದಿಂದಲೂ ಎದ್ದು ನಿಲ್ಲುವರು.)

ದಸ್ರ:—ತಮ್ಮಾ, ಈ ದೃಶ್ಯವು ಅಸಹನೀಯವಾದದ್ದು!

ನಾಸತ್ಯ:—ಇದಕ್ಕಿಂತಲೂ ಮರಣವು ಒಳಿತಾದದ್ದು!

ದಸ್ರ:—ಈ ದೃಶ್ಯವನ್ನು ನೋಡುವದಕ್ಕಿಂತ ಮರಣವನ್ನಾಲಂಗಿಸುವದು ಮೇಲು!

ನಾಸತ್ಯ:—ದೈತ್ಯರಾಜನೇ, ನಾವು ಈ ನೋಟವನ್ನು ನೋಡಲಾರೆವು! ನಮ್ಮನ್ನು ಈಗಳೆ ಸಂಹರಿಸಿ ಬಿಡು!

ಬಲಾಸುರ:—ಬೆಳಕಿನ ಮಗಳೆ, ಅಳದಿರು. ನಿನ್ನ ಈ ಕಣ್ಣೀರಿಗಿಂತ ಮೋರೆಯ ನಗುವು ಸರಸವಾದದ್ದು! ನಗು ಆ ನಗುವನ್ನು ನಕ್ಕು

ನನ್ನನ್ನು ಸಂತೋಷಪಡಿಸು!

ವೃತ್ರಾಸುರ:—(ಕುಪಿತನಾಗಿ) ತಮ್ಮಾ, ಪ್ರೇಮಾಲಾಪಕ್ಕೆ ಇದು ಉಚಿತ ಸ್ಥಳವಲ್ಲ. ನೀನವಳನ್ನು ಬೇರೆ ಕಡೆಗೆ ಕರೆದೊಯ್ಯು. ಸ್ವೇಚ್ಛೆಯಂತೆ ಸರಸ ಸಲ್ಲಾಪಗಳನ್ನಾಡು.

ಬಲಾಸುರ:— ಅತೀವ ಆನಂದದ ಸಂಗತಿ! (ಸೂರ್ಯೆಯನ್ನು ಎತ್ತಿಕೊಂಡು ಹೋಗುವನು.)

ವೃತ್ರಾಸುರ:—ನೀವಿಬ್ಬರೂ ಸೂರ್ಯೆಯ ಪ್ರಣಯಿಗಳು! (ನಕ್ಕು) ನೀವಿಬ್ಬರೇ ಅಲ್ಲ; ಬಲಾಸುರನೊಬ್ಬನು ಮೂರನೆಯ ಪ್ರಣಯಿಯಾಗಿರುವನು! ಹೀಗೆ ಮೂವರು ಪ್ರಣಯಿಗಳನ್ನು ಸಂಪಾದಿಸಿರುವ ಅವಳು ಭಾಗ್ಯವಂತೆಯೆ ಸರಿ! ಅಲ್ಲವೆ? ನೀವಿಬ್ಬರಂತೂ ಪ್ರಣಯಕ್ಕಾಗಿ ಪ್ರಾಣಕೊಡಲಿಕ್ಕೆ ಸಿದ್ಧರಾಗಿರುವಿರಿ! ಮರಣದ ಮಾತೆತ್ತಿದಿದ್ದರೆ ಪ್ರಣಯಕ್ಕೆ ಕಳೆಯೇರದು! ನಿಮ್ಮದು ಪ್ರವಿತ್ರಪ್ರೇಮ! ದಿವ್ಯಪ್ರೇಮ! ಅಂತೆಯೇ ನೀವೀಗ ಪ್ರಣಯವು ನಿಷ್ಫಲವಾದುದನ್ನು ತಿಳಿದು ಮರಣಕ್ಕೆ ಸಿದ್ಧರಾಗಿರುವಿರಿ! ಅಲ್ಲವೆ? ಸಾಯಿರಿ ನಾನು ಬೇಡೆನ್ನುವದಿಲ್ಲ! ಶತ್ರುಗಳ ಸಂಖ್ಯೆಯು ಕಡಿಮೆಯಾದಷ್ಟು ಹಿತಕರವು! ಮರಣದ ಪೂರ್ವದಲ್ಲಿ ನಿಮಗೊಂದು ಉಪಕಾರಮಾಡಬೇಕೆಂದಿದ್ದೇನೆ. ಏನೆಂಬದನ್ನು ಹೇಳುವೆನು. ಲಕ್ಷ್ಯವಿರಿಸಿ ಕೇಳಿಕೊಳ್ಳಿರಿ. ನೀವಿಬ್ಬರು ಎದಿರುಬದಿರಾಗಿ ನಿಂತುಕೊಳ್ಳಿರಿ. ಬಿಲ್ಲಿನಲ್ಲಿ ಬಾಣವನ್ನು ಹೂಡಿರಿ. ಒಬ್ಬನ ಮೇಲೊಬ್ಬನು ಪ್ರಯೋಗಿಸಿರಿ. ನೀವು ಹೀಗೆ ಮಾಡಿದರೆ ಮರಣದ ಕ್ಷಣಕಾಲಮುಂಚೆ ನಿಮ್ಮ ಪ್ರಣಯಿನಿಯು ಬಂಧಮುಕ್ತಳಾಗಿರುವದನ್ನು ಕಾಣುವಿರಿ. ಆಬಳಿಕ ನೀವು ನಿಮ್ಮ ಪ್ರಿಯತಮೆಯು ದೈತ್ಯನ ಸೆರೆಮನೆಯಿಂದ ಪಾರಾಗಿ ಸುರಕ್ಷಿತಳಾಗಿರುವದನ್ನು ಕಣ್ಣುಟ್ಟ ಕಂಡು ಕಣ್ಣು ಮುಚ್ಚುವಿರಂತೆ! ನಾನು ಹೇಳಿದ್ದು ನಿಮಗೆ ತಿಳಿಯಿತೆ? ನನ್ನ ಹೇಳಿಕೆಯಂತೆ ನೀವು ಸಾಯಲಿಕ್ಕೆ ಸಿದ್ಧರಾದರೆ, ನಾನು ಸೂರ್ಯೆಯನ್ನು ಬಂಧಮುಕ್ತಮಾಡುವೆ

ನೆಂದು ಪ್ರತಿಜ್ಞೆ ಮಾಡಿ ಹೇಳುತ್ತೇನೆ! ನಿಮಗೆ ಇನ್ನೇನು ಬೇಕು? ಹೇಗಿದ್ದರೂ ನೀವು ಮರಣಕ್ಕೆ ಸಿದ್ಧರೇ ಇರುವಿರಿ! ನಾನು ಹೇಳಿದಂತೆ ಏಕೆ ಮಾಡಲಾಗದು?............

ಅಶ್ವಿನೀ ಕುಮಾರರು:—ನಮ್ಮ ಮರಣದಿಂದ ಸೂರ್ಯೆಯು ಬಂಧಮುಕ್ತಳಾಗುವಳೆ? ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಿರುವೆಯಾ?

ವೃತ್ರಾಸುರ:—ಪ್ರತಿಜ್ಞೆ ಮಾಡಿ ಹೇಳಿದ್ದೇನೆ!

ಅಶ್ವಿನೀ ಕುಮಾರರು:—ಸೂರ್ಯೆಯು ಬಂಧಮುಕ್ತಳಾಗಲಿ! ಸುರಕ್ಷಿತಳಾಗಲಿ! ನಾವು ಅವಳಿಗಾಗಿ ಮರಣಕ್ಕೆ ಸಿದ್ಧರಿದ್ದೇವೆ!

ವೃತ್ರಾಸುರ:—ನೀವು ನಿಜ ಪ್ರಣಯಿಗಳು! ಮನಸಾ ಸೂರ್ಯೆಯನ್ನು ಪ್ರೀತಿಸಿದ್ದೀರಿ! ಇನ್ನು ನೀವು ನಾನು ತೆಗೆದುಕೊಳ್ಳುತ್ತಿರುವ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ನಿಮ್ಮ ದಿವ್ಯ ಪ್ರೇಮವನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡಬೇಕಾಗಿದೆ!

ಅಶ್ವಿನೀ ಕುಮಾರರು:—ಸೂರ್ಯೆ, ಸೂರ್ಯೆ! (ದೂರದಲ್ಲಿದ್ದ ಸೂರ್ಯೆಯು ಪ್ರಿಯತಮರೆ, ಪ್ರಿಯತಮರೆ! ಎಂದು ಕೂಗಿ ಉತ್ತರ ಕೊಡುವಳು.) ದೈತ್ಯರಾಜನೆ, ನಿನ್ನ ಹೇಳಿಕೆಯ ಮೇರೆಗೆ ಸಾಯಲಿಕ್ಕೆ ಸಿದ್ಧರಾಗಿದ್ದೇವೆ. ನೀನು ನಮ್ಮ ಕಣ್ಣುಗಳನ್ನು ಕಟ್ಟಿಬಿಡು. ಯಾಕೆಂದರೆ, ಸಾವಿಬ್ಬರು ಅಣ್ಣ-ತಮ್ಮಂದಿರು. ಒಬ್ಬನ ಮರಣವನ್ನೊಬ್ಬನು ನೋಡಲಾರದವರಾಗಿರುವೆವು! ಅದರಲ್ಲೂ ಅಣ್ಣನ ಕೈಯಿಂದ ತಮ್ಮನೂ, ತಮ್ಮನ ಕೈಯಿಂದ ಅಣ್ಣನೂ ಮೃತನಾಗಬೇಕಿದೆ!

ದಸ್ರ:—ತಮ್ಮಾ!

ನಾಸತ್ಯ:—ಅಣ್ಣಾ! (ಆಲಿಂಗಿಸುವರು.)

ಅಶ್ವಿನೀ ಕುಮಾರರು:—ದೈತ್ಯನೆ, ತಡವೇಕೆ? ನಮ್ಮ ಕಣ್ಣುಗಳನ್ನು ಕಟ್ಟು—

ದಸ್ರ:—ನೀನು ಕಟ್ಟುವದಾದರೂ ಏಕೆ, ನಾವೇ ನಮ್ಮ ನೇತ್ರ

ಗಳನ್ನು ಬಂಧಿಸಿಕೊಳ್ಳುವೆವು. (ಒಬ್ಬನು ಮತ್ತೊಬ್ಬನ ಕಣ್ಣು ಕಟ್ಟುವನು)

ಅಶ್ವಿನೀ ಕುಮಾರರು:—ನಾವು ನಮ್ಮ ಹೇಳಿಕೆಯಂತೆ ಮರಣ ಹೊಂದುತ್ತಿರುವೆವು. ನೀನು ನಿನ್ನ ಧರ್ಮವನ್ನು ಪಾಲಿಸು. ಕೊಟ್ಟ ವಚನದ ಮೇರೆಗೆ ಸೂರ್ಯೆಯನ್ನು ದೇವತೆಗಳ ಕಡೆಗೆ ಕಳುಹಿಕೊಡು.

ವೃತ್ರಾಸುರ:—ಅವಶ್ಯವಾಗಿ ಕಳುಹಿ ಕೊಡುವೆನು! ತಪ್ಪದೆ ಕಳುಹಿಕೊಡುವೆನು! ಈ ವಿಷಯದಲ್ಲಿ ನೀವು ನಿಧಾರ್ನಸ್ತರಾಗಿರಿ. ನೀವಿಬ್ಬರೂ ಒಮ್ಮೆಲೆ—ಒಂದೇ ಕ್ಷಣದಲ್ಲಿ—ಒಂದೇ ಮುಹೂರ್ತದಲ್ಲಿ ಸಾಯಬೇಕು. ಇದಕ್ಕಾಗಿ ನಾನೊಂದು ಹಂಚಿಕೆಯ ಹೇಳಿ ಕೊಡುವೆನು. ಆಗೋ ಆ ಗಿಡದಲ್ಲಿ ಕಾಗೆಯು ಕುಳಿತಿದೆಯಷ್ಟೆ? ಅದು ಕೂಗುತ್ತಲೆ, ನೀವು ಬಿಲ್ಲು ಹೊಡೆಯಿರಿ. ಸರಿಯಾಗಿ ಬಾಣಪ್ರಯೋಗಮಾಡಿ ಸತ್ತುಹೋದರೆ, ಸೂರ್ಯೆಯು ಮುಕ್ತಳಾಗುವಳು. ಮರಣದ ಪೂರ್ವದಲ್ಲಿ ಮೃತ್ಯುಮುಖಿನ ನೇತ್ರಗಳಿಂದ ಸೂರ್ಯೆಯ ಬಂಧಮುಕ್ತತೆಯನ್ನು ಕಾಣುವಿರಿ. ನೀವು ಸಾಯದಿದ್ದರೆ, ಸೂರ್ಯೆಯು ಮುಕ್ತಳಾಗಳು.

ಅಶ್ವಿನೀ ಕುಮಾರರು:—ದೈತ್ಯನೆ, ನೀನು ಹೇಳದಂತೆ ತಪ್ಪದೆ ಮಾಡುವೆವು. ಒಮ್ಮೆಲೆ ಬಾಣಪ್ರಯೋಗ ಮಾಡಿ ಒಂದೇ ಮುಹೂರ್ತದಲ್ಲಿ ನಾವಿಬ್ಬರೂ ಸತ್ತು ಹೋಗುವೆವು.

ವೃತ್ರಾಸುರ:—ಆಗಲಿ. ನಾನು ಸೂರ್ಯೆಯ ಬಿಡುಗಡೆಗಾಗಿ ಒಳಗೆ ಹೋಗಿ ಬರುವೆನು. (ಹೋಗುವನು.)

ದಸ್ರ:—ಕಾಗೆಯೆ, ಬೇಗನೆ ಕೂಗು. ಒಮ್ಮೆಯಾದರೂ ಬೇಗ ಒದರು.

ನಾಸತ್ಯ:—ಅಣ್ಣಾ, ಕಾಗೆಯು ಕೂಗಲೊಲ್ಲದಲ್ಲ! ಕಾಲವಿಳಂಬವು ಅಸಹನೀಯವಾಗಿದೆ! ಮರಣಕ್ಕಾಗಿ ದಾರಿಯ ಕಾಯುತ್ತಿರುವದು ತುಂಬ ತಾಪದಾಯಕವು!

ದಸ್ರ:—ತಮ್ಮಾ, ಸುಮ್ಮನಿರು. ನಮ್ಮ ಮಾತಿನ ಗದ್ದಲದ್ದ

ಕಾಗೆಯು ಕೂಗು ಕೇಳಬರಲಿಕ್ಕಿಲ್ಲ.

(ಇಬ್ಬರೂ ಸುಮ್ಮನೆ ಇದ್ದು ಕಾಗೆಯು ರವವನ್ನು ಕೇಳಲಿಕ್ಕೆ ಉತ್ಸುಕರಾಗಿರುವರು.)

(ವೃತ್ರಾಸುರನ ಆದೇಶದಂತೆ ಸೂರ್ಯೆಯು ಬಿಡುಗಡೆ ಹೊಂದಿ ಪ್ರಿಯತಮರ ಬಳಿಗೆ ಧಾವಿಸಿ ಬರುವಳು ಅಶ್ವಿನೀಕುಮಾರರನ್ನು ನೋಡುವಳು. ಅಶ್ವಿನೀಕುಮಾರರ ಕೃತಿಯನ್ನು ಹುಡುಗಾಟವೆಂದು ಭಾವಿಸುವಳು. ನಡುವೆ ಹೋಗಿ ನಿಲ್ಲುವಳು. ವೃತ್ರಾಸುರನು ದೂರದಿಂದ ನೋಡಿ ಧಾವಿಸಿ ಬರಹತ್ತುವನು. ಕಾಗೆಯು ಕೂಗುವದು. ಅಶ್ವಿನೀಕುಮಾರರು ಬಾಣಪ್ರಯೋಗ ಮಾಡುವರು. ಬಾಣಗಳು ನೆಡುವದರಿಂದ ಸೂರ್ಯೆಯು ಚೀತ್ಕಾರ ಮಾಡಿ ಬಿದ್ದುಬಿಡುವಳು! ವೃತ್ರಾಸುರನು ಅವಳನ್ನು ಹಿಡಿದುಕೊಳ್ಳುವನು. ಅಶ್ವಿನೀಕುಮಾರರು ಬಾಣಪ್ರಯೋಗವು ನಿರರ್ಥಕವಾದುದನ್ನು ಭಾವಿಸಿ, ಶಂಕಾಕುಲರಾಗಿ ಕಣ್ಣುಕಟ್ಟನ್ನು ಬಿಚ್ಚಿಕೊಂಡು ನೋಡುವರು.)

ದಸ್ರ:—ಅಯ್ಯೋ, ಅನರ್ಥವಾಯಿತು! ನಾವಿದೇನು ಮಾಡಿದೆವಲ್ಲ!

ನಾಸತ್ಯ:—ತೀರ ಅನುಚಿತ ವ್ಯಾಪಾರವು ನಡೆದಿದೆಯಲ್ಲ!

(ಇಬ್ಬರೂ ಹೋಗಿ ವೃತ್ರಾಸುರನಿಂದ ಸೂರ್ಯೆಯನ್ನು ಕಸಿದುಕೊಳ್ಳುವರು. ಶೋಕಿಸುವರು.)

ವೃತ್ರಾಸುರ:—ಹೀಗಾಗಬೇಕೆಂದು ನಾನು ಆಶಿಸಿದವನಲ್ಲ. ಯಾರಲ್ಲಿ? ಬಲಾಸುರ, ಬಲಾಸುರ.

(ಬಲಾಸುರನು ಕೈಯಲ್ಲಿ ಪುಷ್ಪಪಾತ್ರೆಯನ್ನು ಹಿಡಿದುಕೊಂಡು ಪ್ರವೇಶಿಸುವನು. ನಡೆದ ಕೃತಿಯನ್ನು ನೋಡಿ ಗಾಬರಿಯಾಗುವನು. ಪುಷ್ಪಪಾತ್ರೆಯು ತಾನೇ ತಾನಾಗಿ ಬಿದ್ದು ಹೋಗುವದು.)

ದಸ್ರ:—ಸೂರ್ಯೆ, ನನ್ನ ಪ್ರಿಯ ಸೂರ್ಯೆ, ಹೀಗೇಕೆ ಸುಮ್ಮನಿರುವೆ? ಒಂದೇ ಒಂದು ಸಲವಾದರೂ ನನ್ನೊಡನೆ ಮಾತಾಡು!

ನಾಸತ್ಯ:—ಪ್ರಿಯತಮೆ, ನಿನ್ನ ಈ ಪ್ರಿಯನನ್ನು ಕಣ್ದೆರೆದು ನೋಡು! ನಾನು ನಿನಗೋಸುಗ ಇಲ್ಲಿಗೆ ಬಂದವನಲ್ಲವೆ? ಹೀಗೆ ಕಣ್ಣುಗಳನ್ನೇಕೆ ಮುಚ್ಚಿಕೊಂಡಿರುವೆ?

ದಸ್ರ:—ನೀನು ಯಾರನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿದ್ದೆಯೊ ಅವರ ಕೈಯಿಂದಲೆ ನಿನಗೆ ಮರಣವಾಗಬೇಕೆ? ನಿನ್ನ ಹಣೆಯ ಬರಹವು ಹೀಗೆಯೆ ಇದ್ದಿತೆ?

ನಾಸತ್ಯ:—ಮಾತಾಡು! ಕಣ್ತೆರೆದು ನೋಡು! ಶಕ್ತಿಹೀನರು ನಾವು! ಅಯೋಗ್ಯರು ನಾವು! ನಿನ್ನನ್ನು ದೈತ್ಯನ ಕಾರಾಗಾರದಿಂದ ಬಿಡುಗಡೆ ಮಾಡಲಾರದವರಾಗಿ, ಇಹಲೋಕದಿಂದಲೆ ಬಿಡುಗಡೆ ಮಾಡಿಬಿಟ್ಟಿರುವೆವು! ಪ್ರಣಯದ ಪ್ರತಿಫಲವಾಗಿ ಮರಣದಾನ ಮಾಡಿರುವೆವು! ಅಯ್ಯೊ, ಇನ್ನು ನಾನೇನು ಮಾಡಲಿ? ಹೇಗೆ ಜೀವಿಸಲಿ?............... ಹೀಗೆ ವಿಪರೀತ ಕಾರ್ಯವು ನಡೆದದ್ದಾರಿಂದ? ನಾವೀ ದಾನವನ ಕಪಟಕ್ಕೊಳಗಾಗಿ ಪ್ರಿಯತಮೆಯನ್ನು ಸಂಹರಿಸಿದೆವಲ್ಲವೆ? ಆದರೆ ಈ ಕಪಟ ದೈತ್ಯನನ್ನು ಸಂಹರಿಸುವ ಶಕ್ತಿಯು ನಮ್ಮಲ್ಲಿಲ್ಲದಾಗಿದೆ! ನಿರುಪಾಯರು ನಾವು!....(ವೃತ್ರಾಸುರನನ್ನು ಕುರಿತು) ದಾನವನೆ, ಇನ್ನು ಜೀವಿಸಿರುವದು ನನಗೆ ಬೇಡಾಗಿದೆ! ಬೇಗನೆ ನನ್ನನ್ನು ವಧಿಸಿ ಬಿಡು!

ದಸ್ರ:—ದಾನವರಾಜನೆ, ಈ ಸ್ಥಿತಿಯಲ್ಲಿರುವದು ನನಗೆ ತೀರ ಅಸಹ್ಯವಾಗಿದೆ. ನಾನು ಬೇಗನೆ ಹೋಗಿ ಪರಲೋಕದಲ್ಲಿ ನನ್ನ ಪ್ರಿಯತಮೆಯನ್ನು ಮಾತಾಡಿಸಬೇಕೆಂದಿದ್ದೇನೆ! ಸಂಹರಿಸು! ಕಾಲವಿಲಂಬ ಮಾಡದೆ ನನ್ನನ್ನು ಸಂಹರಿಸು.

ಬಲಾಸುರ:—ಬೆಳಕಿನ ಮಗಳೆ, ಹೀಗೆ ಮಲಗಿರುವೆಯೇಕೆ? ಏಳು, ಕಣ್ತೆರೆದು ನೋಡು, ಮಾತಾಡು! ಬಹಳ ಬೇಡ, ಒಂದೇ ಒಂದು ಮಾತನ್ನಾದರೂ ಆಡು!

ದಸ್ರ:—ಸತ್ತು ಹೋಗಿರುವಳು! ನಮ್ಮ ಜೀವನದ ಜ್ಯೋತಿಯು ಶಾಂತವಾಗಿ ಹೋಗಿದೆ! ಇನ್ನು ಇದನ್ನು ಹೊತ್ತಿಸುವರಾರು? ನಮಗೆ ಬೆಳಕನ್ನು ತೋರುವರಾರು? ಗುರು ದಧೀಚಿಋಷಿಗಳು ಇಲ್ಲಿದ್ದರೆ, ಇವಳನ್ನು ಬದುಕಿಸುತ್ತಿದ್ದರು! ನಮ್ಮ ದುಃಖವನ್ನು ಪರಿಹರಿಸುತ್ತಿದ್ದರು!

ಆದರೆ ಅವರು ಈಗ ಇಲ್ಲಿಗೆ ಹೇಗೆ ಬರಬೇಕು?

ನಾಸತ್ಯ:—ನಿಯತಿಯು ನಮ್ಮ ವಿಷಯದಲ್ಲಿ ನಿಷ್ಠುರವಾಗಿದೆ! ಅಂತೆಯೆ ದಧೀಚಿ ಋಷಿಗಳು ಕಾಣದಾಗಿದ್ದಾರೆ! ಅವರ ಮಧುವಿದ್ಯೆಯು ಉಪಯೋಗಕ್ಕೆ ಬೀಳದ್ದಾಗಿದೆ! ಒಟ್ಟಿನ ಮೇಲೆ ಸೂರ್ಯೆಯ ಪ್ರಾಣ ರಕ್ಷಣೆಯು ಅಸಂಭವನೀಯವಾಗಿದೆ!

ಅಶ್ವಿನೀ ಕುಮಾರರು:—ದಾನವ ರಾಜನೆ, ಅನುಮಾನ ಮಾಡದೆ ನಮ್ಮನ್ನು ಸಂಹರಿಸಿ ಬಿಡು! ನಮಗೆ ಬದುಕಿರುವದು ತೀರ ಅಸಹ್ಯವೆನಿಸಿದೆ!

ಬಲಾಸುರ:—ಅಣ್ಣಾ, ನನ್ನನ್ನೂ ಕೊಂದು ಬಿಡು!

(ವೃತ್ರಾಸುರನ ಪಾದಗಳ ಮೇಲೆ ಬಿದ್ದು ಹೊರಳಾಡುವನು.)

ವೃತ್ರಾಸುರ:—ತಮ್ಮಾ, ಏಳು. ನೀವೆಲ್ಲರೂ ಶಾಂತರಾಗಿರಿ.

ದಸ್ರ:—ಸೂರ್ಯೆ! ಪ್ರಿಯತಮೆ ಸೂರ್ಯೆ!

ನಾಸತ್ಯ:—ಅಣ್ಣಾ, ಇಲ್ಲ! ಅವಳು ನಮ್ಮನ್ನು ಬಿಟ್ಟು ಬಹು ದೂರ ಹೋಗಿರುವಳು!

ಬಲಾಸುರ:—ಇವಳು ಇನ್ನು ಬದುಕಲಾರಳೆ? ಈ ದೀಪವು ಮತ್ತೆ ಹೊತ್ತಲಾರದೆ? ಈ ಪುಷ್ಪ ಮತ್ತೆ ಅರಳಲಾರದೆ?

(ವೃತ್ರಾಸುರನು ನಿಶ್ಚಳನಾಗಿದ್ದ ದಧೀಚಿಯನ್ನು ಕರೆತರುವನು)

ವೃತ್ರಾಸುರ:—(ಮೊಳಕಾಲೂರಿ ಕುಳಿತು) ಋಷಿವರ್ಯನೆ, ಇವಳನ್ನು ಬದುಕಿಸು. ನಿನ್ನ ಮಧುವಿದ್ಯೆಯ ಬಲದಿಂದ ನಿರಪರಾಧಿನಿಯಾದ ಈ ಬಾಲೆಯ ಪ್ರಾಣವನ್ನುಳಿಸು.

ಅಶ್ವಿನೀ ಕುಮಾರರು:—(ಓಡಿ ಬಂದು ದಧೀಚಿಯ ಪಾದಗಳನ್ನು ಹಿಡಿಯುವರು.) ಗುರುಗಳೆ, ನಮ್ಮ ಈ ಸೂರ್ಯೆಯನ್ನು ಹೇಗಾದರೂ ಮಾಡಿ ಬದುಕಿಸಿರಿ!

ಬಲಾಸುರ:—ಋಷಿಶ್ರೇಷ್ಠನೆ, ಬೆಂಕಿಯ ಬೆಳಕು ನಂದಿಹೋಗಿದೆ!

ಬೆಳಕಿನ ಮಗಳು ಅಚೇತನಳಾಗಿ ಬಿದ್ದುಕೊಂಡಿದ್ದಾಳೆ! ಎಷ್ಟು ಮಾತಾಡಿಸಿದರೂ ಮಾತಾಡಲೊಲ್ಲಳು! ದಯವಿಟ್ಟು ನೀವು ಇವಳನ್ನು ಬದುಕಿಸಿರಿ! ಏನಾದರೂ ಮಾಡಿ, ಇವಳು ಮತ್ತೆ ಮಾತಾಡುವಂತೆ ಮಾಡಿರಿ!

ದಧೀಚಿ:—(ಮೆಲ್ಲಮೆಲ್ಲನೆ ತಡವರಿಸುತ್ತ ಸೂರ್ಯೆಯ ಶವದ ಹತ್ತಿರ ಹೋಗುವನು. ಮೈಮೇಲೆ ಕೈ ಎಳೆಯುವನು.) ರವಿನಂದನೆಯೆ, ಏಳು. ಅಗೊ, ಅಲ್ಲಿ ನೋಡು. ಸೂರ್ಯನು ಉದಯನಾಗಿದ್ದಾನೆ. ಪರ್ವತಶಿಖರಗಳಲ್ಲಿಯ ಹಿಮವು ಕರಗುವದರಲ್ಲಿದೆ. (ಸೂರ್ಯೋದಯವಾಗುವದು. ಪೃಥ್ವಿಯು ಸುವರ್ಣವರ್ಣದಿಂದ ರಂಜಿತವಾಗುವದು.)

ಸೂರ್ಯೆ:—(ಕಣ್ತೆರೆದು) ಗುರುವರ್ಯರೆ!

ದಧೀಚಿ:—ಅಮ್ಮಾ, ಏಳು. ಜಾಗ್ರತಳಾಗು!

ಸೂರ್ಯೆ:—(ಅಶ್ವಿನೀ ಕುಮಾರರನ್ನು ನೋಡಿ) ಪ್ರಿಯತಮರೆ!

ಅಶ್ವಿನೀ ಕುಮಾರರು:—ಪ್ರಿಯೆ, ಏಳು!

ಬಲಾಸುರ:—(ಪುಷ್ಪಪಾತ್ರೆಯಿಂದ ಒಂದು ಪುಷ್ಪಗುಚ್ಛವನ್ನು ಕೈಯಲ್ಲಿ ತಕ್ಕೊಂಡು) ಬೆಳಕಿನ ಮಗಳೆ, ನನ್ನನ್ನು ನೀನು ಪ್ರೀತಿಸಲಾರೆಯೆಂಬುದನ್ನು ನಾನು ಬಲ್ಲೆನು! ನಾನು ಕಠಿಯನಾಗಿದ್ದರೂ, ಸಮರ್ಪಿಸುವ ಈ ಹೂಗೊಂಚಲವು ಕಠಿಯದಲ್ಲ, ಕುರೂಪವಲ್ಲ; ನನ್ನನ್ನು ಗ್ರಹಿಸದಿದ್ದರೂ ಚಿಂತೆಯಿಲ್ಲ. ನಾನು ಪ್ರೀತಿಯಿಂದ ಕೊಡುತ್ತಿರುವ ಈ ಕುಸುಮಗುಚ್ಛವನ್ನು ಸ್ವೀಕರಿಸು! (ಮೊಳಕಾಲೂರಿ ಕುಳಿತು ಪುಷ್ಪಗುಚ್ಛವನ್ನು ಕೊಡಹೋಗುವನು.)

ಸೂರ್ಯೆ:—ಬಲ್ಲೆ, ನಾನಿದನ್ನು ಗ್ರಹಿಸಲಾರೆನು!

ವೃತ್ರಾಸುರ:—(ಸೂರ್ಯೆಯನ್ನು ಕುರಿತು) ಸುಂದರಿ, ಸರಿಯಾಗಿ ಉತ್ತರಕೊಟ್ಟೆ! (ಬಲಾಸುರನನ್ನು ಕುರಿತು) ಉಚಿತವಾದ ಶಿಕ್ಷೆಯಾದಂತಾಯಿತು! ತಮ್ಮಾ, ಈ ಶಿಕ್ಷೆಯು ನಿನಗೊಬ್ಬನಿಗೇ ಅಲ್ಲ, ಕರಿದೊಗಲಿನವರಿಗೆಲ್ಲರಿಗೂ ಸಂಬಂಧಿಸಿದ್ದಾಗಿದೆ! ಇವಳ ಈ ಉತ್ತರದ ಮರ್ಮವನ್ನು

ಗ್ರಹಿಸಿ, ದಾನವರ ದೇಹದ ಕರಿದೊಗಲಿನ ಆವರಣದೊಳಗಿದ್ದ ರಕ್ತವು ನಾಚುಗೆಯಿಂದಲೂ ತಿರಸ್ಕಾರದಿಂದಲೂ ಮತ್ತಷ್ಟು ಕೆಂಪುವರ್ಣದ್ದಾಗಲಿ, ಒತ್ತರದಿಂದ ಹರಿಯುಹತ್ತಲಿ! ಋಷಿಯೆ, ನೀನು ನನ್ನ ಪ್ರತಿಬಂಧದಿಂದ ಮುಕ್ತನಾಗಿರುವೆ. ಶಿಷ್ಯದ್ವಯರೇ, ನೀವೂ ಮುಕ್ತರು; ಹಾಗು ಈ ಸುಂದರಿಯೂ ಬಂಧಮುಕ್ತಳು. ನಾನು ಉದಾರಹೃದಯದಿಂದ ದಯದೋರಿ ನಿಮ್ಮನ್ನು ಬಿಡುಗಡೆಮಾಡಿರುವೆನೆಂದು ಭಾವಿಸಬೇಡಿರಿ! ಕರಿವ್ಯಾಘ್ರನು ಹೂವ ಹಿಡಿದಿದ್ದನೆಂಬಿಷ್ಟೇ ಕಾರಣದಿಂದ ಯಾರು ಆ ಹೂವನ್ನು ತಿರಸ್ಕರಿಸಿದರೊ, ಅವರ ವಸತಿಯಿಂದ ದೂಷಿತವಾದ ವಾಯುವನ್ನು ನಾನು ಉಸಿರಾಡಿಸಲಾರದವನಾಗಿರುವೆನು! ಅಂತೆಯೆ ಈಗ ನಿಮ್ಮನ್ನು ಈ ಸ್ಥಳದಿಂದ ದೂರಕಳಿಸುತ್ತಿರುವೆನು! ತಿಳಿಯಿತೆ? (ದಧೀಚಿಯೂ ಅಶ್ವಿನೀಕುಮಾರರೂ ಸೂರ್ಯೆಯೂ ಹೋಗುವರು) ದೇವತೆಗಳು ಶ್ವೇತವರ್ಣದವರು. ನಾವು ಕೃಷ್ಣವರ್ಣದವರು. ಇಷ್ಟರಿಂದಲೇ ಅವರು ಶ್ರೇಷ್ಠರೂ ನಾವು ಕನಿಷ್ಠರೂ ಆಗಬಹುದೆ? ನಾವು ಕರಿಯಬಣ್ಣದವರಾಗಿರುವಲ್ಲಿ ನಮ್ಮ ತಪ್ಪೇನು? ನಾನು ನನ್ನ ಬಲದಿಂದ, ಅಸುರರ ಸಾಮೂಹಿಕ ಶಕ್ತಿಯ ಸಹಾಯದಿಂದ ಜಯಶಾಲಿಯಾಗುವೆನು. ದೇವತೆಗಳನ್ನು ನಿರ್ವೀರ್ಯರನ್ನಾಗಿ ಮಾಡುವೆನು. ಕೃಷ್ಣವರ್ಣದವರೇ ಶ್ರೇಷ್ಠರೆಂಬುದನ್ನು ಸಿದ್ಧಗೊಳಿಸುವೆನು! (ಹೋಗುವನು. ಬಲಾಸುರನೂ ಅಣ್ಣನನ್ನನುಸರಿಸಿ ಹೋಗುವನು.)



# ದ್ವಿತೀಯಾಂಕ.

(ಸರಸ್ವತೀ ನದಿಯ ಸೇತುವೆಯ ಬಳಿಯಲ್ಲಿಯ ದಧೀಚಿಯ ಆಶ್ರಮ. ಕುಟೀರವು ತರುಲತೆಗಳ ಛಾಯೆಯಿಂದ ಆಚ್ಛಾದಿತವಾಗಿದೆ. ಸಮ್ಮುಖದಲ್ಲಿ ಯಜ್ಞವೇದಿಯು. ಬಳಿಯಲ್ಲಿ ದಧೀಚಿಯು ಕುಳಿತಿದ್ದಾನೆ. ಉಷೆಯು ಬಂದು ನಮಸ್ಕರಿಸುವಳು. ದಧೀಚಿಯ ಆಶೀರ್ವಾದ ಹೊಂದಿ ನಿಲ್ಲುವಳು.)

ದಧೀಚಿ:—ಶಚಿ ಎಲ್ಲಿರುವಳು?

ಉಷೆ:—ಯಜ್ಞದ ಉಪಕರಣಗಳನ್ನು ಸಂಗ್ರಹಿಸುತ್ತಿರುವಳು. ಸೂರ್ಯೆಯು ದೈತ್ಯನ ಸೆರೆಯಿಂದ ಪಾರಾಗಿ ಬಂದಿರುವಳಷ್ಟೆ?

ದಧೀಚಿ:— ಅಹುದು, ಬಂದಿರುವಳು. ಸೂರ್ಯನು ಅವಳನ್ನು ಅಶ್ವಿನೀ ಕುಮಾರರಿಗೆ ಕೊಟ್ಟು ಲಗ್ನ ಮಾಡಿರುವನು. ಇನ್ನು ಅಲ್ಪಾವಧಿಯಲ್ಲಿಯೆ ಅವರೆಲ್ಲರು ನನ್ನ ಆಶೀರ್ವಾದ ಸಂಪಾದನೆಗಾಗಿ ಇಲ್ಲಿಗೆ ಬರತಕ್ಕವರಿದ್ದಾರೆ.

ಉಷೆ:— ಆ ವರೆಗೆ ನಾನೂ ಇಲ್ಲಿಯೇ ಇದ್ದು ಅವರನ್ನು ನೋಡುವೆನು.

(ನವದಂಪತಿಗಳು ದೇವತೆಗಳಿಂದ ಪರಿವೃತರಾಗಿ ಬರುವರು. ಉಷೆಯು ಸ್ವಾಗತ ಮಾಡುವಳು. ದಂಪತಿಗಳು ದಧೀಚಿಋಷಿಗೆ ನಮಸ್ಕರಿಸುವರು.)

ದಧೀಚಿ:—ಜಯೋಸ್ತು! ಜಯಶೀಲರಾಗಿರಿ. ನಮಗೆ ಬೇಕಾದುದು ಜಯ. ಕೇವಲ ಜಯ. ಈ ಸೂರ್ಯೆಯನ್ನು ದಾನವರ ಸೆರೆಯಿಂದ ಹೇಗೆ ಬಿಡಿಸಿ ತಂದಿರೊ ಹಾಗೆಯೆ ಪರತಂತ್ರವಾಗಿದ್ದ ದೇವಭೂಮಿಯನ್ನು ಉದ್ಧರಿಸಿರಿ. ಮಾತೃಭೂಮಿಯು-ನಮ್ಮೆಲ್ಲರ ಆದರದ ಈ ದೇವಭೂಮಿಯು-ದೈತ್ಯರ ಕಚಾಟಿಯಿಂದ ಪಾರಾಗಿ ಮತ್ತೆ ನಮ್ಮ ಆಧೀನವಾಗಬೇಕು. ಸ್ವತಂತ್ರವಾಗಬೇಕು. ಹೀಗಾದರೇನೇ ನೀವು ಕೃತಕೃತ್ಯರಾಗುವಿರಿ. ಜನ್ಮವೆತ್ತಿದ್ದರ ಸಾರ್ಥಕತೆಯನ್ನು ಹೊಂದುವಿರಿ.

ಹೀಗಾಗುವ ವರೆಗೆ ನಾನು ನಿಮಗೆ ಒಂದೇ ಒಂದು ಆಶೀರ್ವಾದ ಮಾಡು ವೆನು. ಅದಾವುದೆಂದರೆ, ಜಯೋಽಸ್ತು-ಜಯಶೀಲರಾಗಿರಿ. ನೀವು ನನ್ನ ಶಿಷ್ಯರಾದಾಗಿನಿಂದಲೂ ಇದೇ ಆಶೀರ್ವಾದವನ್ನು ಮಾಡುತ್ತ ಬಂದಿರು ವೆನು. ಈಗಳೂ ಮಾಡುತ್ತಿರುವೆನು. ನನ್ನ ಈ ಆಶೀರ್ವಾದವು ಬೇಗನೆ ಸಫಲವಾಗಲಿ! (ಸೂರ್ಯೆಯನ್ನು ಕುರಿತು) ಅಮ್ಮಾ, ನೀನು ಪತಿಗೃಹ ವನ್ನು ಸೇರಿ ಗೃಹಿಣಿಯಾಗು. ಮನೆಯ ಯಜಮಾನಿಯಾಗಿ ಎಲ್ಲರ ಮೇಲೂ ಅಧಿಕಾರ ನಡಿಸು; ಹಾಗು ವೀರಮಾತೆಯಾಗು. ಈ ದುರ್ದಿನ ಗಳಲ್ಲಿ ಸ್ವದೇಶಕ್ಕೆ-ಈ ದೇವ ಭೂಮಿಗೆ-ವೀರ ಮಾತೆಯರೂ ವೀರ ಪುತ್ರರೂ ಅತ್ಯವಶ್ಯವಾಗಿ ಬೇಕಿದ್ದಾರೆ. ಯಾವಳು ಹೆತ್ತ ಮಕ್ಕಳನ್ನು ಅತಿ ಮಮತೆಯಿಂದ ಸಲುಹಿ, ಅವರಿಗೆ ಅಚ್ಚಗಲಿಸಿ, ಅವರು ಪ್ರೇಮವೀರರಾ ಗುವಂತೆ ಮಾಡುವಳೊ, ಆ ಮಾತೆಯಿಂದ ಉಪಯೋಗವಿಲ್ಲ. ಯಾವಳು ದೇಶದ ಅಪಮಾನವು ತನ್ನ ಅಪಮಾನವೆಂದು ಭಾವಿಸುವಳೋ, ಹಾಗು ಆ ಅಪಮಾನದ ಗ್ಲಾನಿಯನ್ನು ಪರಿಹರಿಸುವದಕ್ಕೆ ಪುತ್ರರನ್ನು ಪ್ರೇರಿಸು ವಳೋ ಅವಳು ಧನ್ಯಳು. ಇಂತಹ ವೀರಮಾತೆಯು ತನ್ನ ಮಕ್ಕಳಿಗೆ ಸ್ವದೇಶವು ನಿಮ್ಮ ಮಾತೆಯ ಮಾತೆಯು, ಪಿತನ ಪಿತನು, ದೇವರ ದೇವನು, ಇಂತಹ ಪರಮ ದೇವಸ್ವರೂಪವಾಗಿದ್ದ ಮಾತೃಭೂಮಿಯನ್ನು ಪೂಜಿಸಿರಿ, ಮಾತೃಭೂಮಿಯ ಸಲುವಾಗಿ ಪ್ರಾಣವನ್ನರ್ಪಿಸಿರಿ, ಎಂದು ಬೋಧಿಸುವಳು; ಕುಲದೀಪಕತೆಯೂ, ಜೀವನದ ಸಫಲತೆಯೂ, ಮೃತ್ಯು ವಿನ ಸಾರ್ಥಕತೆಯೂ ಮಾತೃಭೂಮಿಯ ಸೇವೆಯಲ್ಲಿ ಅಡಕವಾಗಿದೆಯೆಂ ಬದನ್ನು ಬಿಂಬಿಸುವಳು. ಇಂತಹ ಜನನಿಯ ಶಿಕ್ಷಣದಲ್ಲಿ ಬೆಳೆದ ಪುತ್ರರು ವೀರರಾಗದಿರರು-ದೇಶೋದ್ಧಾರಕರಾಗದಿರರು. ಇಂತಹ ವೀರಪುತ್ರರ ಸಾಮೂಹಿಕ ಪ್ರಯತ್ನದಿಂದ ದಾನವರು ಪರಾಜಿತರಾಗಿ ಶರಣು ಬರು ವರು. ದೇವತೆಗಳ ಜಯ ಜಯಕಾರದಿಂದ ಸುರಲೋಕವು ಮತ್ತೆ ನಿಜವಾದ ಸ್ವರ್ಗವೆನಿಸುವದು.

ಉಳಿದ ದೇವತೆಗಳು:—ವಧೂಪವರೆ, ಗುರುವರ್ಯರಂತೆ ನಾವೂ ನಿಮಗೆ ಆಶೀರ್ವದಿಸುತ್ತಿರುವೆವು. ವೀರರಾಗಿರಿ. ವೀರಮಾತೆಯಾಗು. ಮಾತೃಭೂಮಿಯ ಉದ್ಧಾರಕ್ಕೆ ಅಂಶರೂಪದಿಂದಲಾದರೂ ಕಾರಣೀಭೂತರಾಗಿರಿ.

ಉಷೆ:—ಪ್ರಿಯ ಸಖಿಯೆ, ಅತ್ತೆ ಮಾವಂದಿರನ್ನು ಸ್ವಾಧೀನಪಡಿಸಿಕೊ. ಮನೆಯ ರಾಜ್ಞಿಯಾಗಿ ವ್ಯವಹರಿಸು. ಮೈದುನರನ್ನೂ ನಾದಿನಿ-ನೆಗೆಣ್ಣಿಯರನ್ನೂ ನಿನ್ನ ಅಧಿಕಾರಕ್ಕೊಳಪಡಿಸಿಕೊಂಡು ಸಾಮ್ರಾಜ್ಞಿಯಾಗು.

ದಧೀಚಿ:—ವಧು ಸುಲಕ್ಷಣ ಸಂಪನ್ನೆಯಾಗಿದ್ದಾಳೆ. ಎಲ್ಲರೂ ಬನ್ನಿರಿ. ನೋಡಿರಿ. ಸೌಭಾಗ್ಯವತಿಯಾಗೆಂದು ಆಶೀರ್ವದಿಸಿ ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ.

(ದೇವದೂತಿಯಾದ ಸುರಮೆಯು ಗಾಬರಿಯಾಗಿ ಬರುವಳು.)

ಸುರಮೆ:—ಬಲಾಸುರನು ದೈತ್ಯಸೈನ್ಯಸಮೇತನಾಗಿ ಬಂದು ಸೂರ್ಯದೇವನಿಂದ ಬಳುವಳಿಯಾಗಿ ಪಡೆದಿದ್ದ ಅಶ್ವಿನೀಕುಮಾರರ ಗೋಧನವನ್ನು ಅಪಹರಿಸಿಕೊಂಡು ಹೋದನು! ಗೋಪಾಲಕರಲ್ಲಿಯ ಹಲವರು ಮೃತರಾಗಿದ್ದಾರೆ. ಉಳಿದವರನ್ನು ಬಲಾಸುರನು ಬಂದಿಗಳನ್ನಾಗಿ ಮಾಡಿಕೊಂಡೊಯ್ದಿದ್ದಾನೆ!

ಇಂದ್ರ:—ಯುದ್ಧವು ಅನಿವಾರ್ಯವಾದುದು. ಇನ್ನು ಯುದ್ಧಕ್ಕೆ ಸಿದ್ಧರಾಗಲೆ ಬೇಕು.

ಅಶ್ವಿನೀಕುಮಾರರು:—ಪ್ರಿಯೆ, ಅಪ್ಪಣೆ ಕೊಡು. ನಾವೂ ಯುದ್ಧಕ್ಕೆ ಹೊರಡುವೆವು.

ಇಂದ್ರ:—ಗುರುವರ್ಯರೆ, ದೇವಾಂಗನೆಯರ ರಕ್ಷಣೆಯ ಭಾರವು ನಿಮ್ಮದು............

ದಧೀಚಿ:—ದೇವರಾಜನೆ, ನಿಶ್ಚಂಕ ಮನಸ್ಸಿನಿಂದ ಯುದ್ಧಕ್ಕೆ

ಹೊರಡು. ಸ್ವದೇಶದ ಮಾನವನ್ನು ರಕ್ಷಿಸು.

ಎಲ್ಲ ದೇವತೆಗಳು:—ಗುರುವರ್ಯರೆ, ನಾವೆಲ್ಲರು ಸ್ವದೇಶದ ಗೌರವ ರಕ್ಷಣೆಗೋಸುಗ ಸಿದ್ಧರಾಗಿರುವೆವು

ದಧೀಚಿ:—ಹೀಗಿದ್ದರೆ ಅನುಮಾನವೇಕೆ? ಹೊರಡಿರಿ. ವಿಲಂಬ ಮಾಡದೆ ಈಗಳೆ ಹೊರಡಿರಿ. ಅಂಗನೆಯರ ವಿಷಯಕ್ಕೆ ಚಿಂತೆ ಮಾಡ ಬೇಡಿರಿ. ಅವರು ತಮ್ಮ ಮಾನವನ್ನು ಕಾಯ್ದುಕೊಳ್ಳಲಿಕ್ಕೆ ಸಮರ್ಥ ರಿರುವರು. ಸ್ವದೇಶದ ಈ ವಿಪತ್ಸಮಯದಲ್ಲಿ ದೇವಾಂಗನೆಯರು ಅಬ ಲೆಯರಲ್ಲ-ರಮಣಿಯರಲ್ಲ-ಕಾಮಿನಿಯರಲ್ಲ-ಜನನಿಯರು. ದೈತ್ಯರ ಉಪ ಟಳದಲ್ಲಿ ಸಿಕ್ಕು ಪೇಚಾಡುತ್ತಿರುವ ವೀರರ ಜಯವನ್ನು ಕೋರುತ್ತಿರುವ ಶಕ್ತಿಸಂಪನ್ನ ಜನನಿಯರು. ನೀವು ದೇವಾಂಗನೆಯರ ವಿಷಯಕ್ಕೆ ತಿಲ ಮಾತ್ರವೂ ಚಿಂತಿಸಬೇಡಿರಿ. ನಿಶ್ಚಿಂತರಾಗಿ ಹೊರಟು ಸಾಹಸದಿಂದ ಯುದ್ಧಮಾಡಿರಿ ಜಯಶಾಲಿಗಳಾಗಿರಿ............

(ದಧೀಚಿಯು ದಾರಿಯನ್ನು ತೋರುವನು. ದೇವತೆಗಳು ಹೋಗುವರು.)

ಉಷೆ:—ಪ್ರಿಯ ಸಖಿ ಸೂರ್ಯೆ, ಭಯಗೊಳ್ಳದಿರು. ಅವರು ಹೋಗಲಿ. ಯುದ್ಧ ಮಾಡಲಿ. ನಾವು ದೂರದಲ್ಲಿ ನಿಂತು ಅವರ ಯುದ್ಧ ಕುಶಲತೆಯನ್ನು ನೋಡೋಣ.

ಸೂರ್ಯೆ:—ಶಚಿಯು ಕಾಣಲೊಲ್ಲಳಲ್ಲ! ಅವಳೆಲ್ಲಿ?

(ದಧೀಚಿಯು ಮತ್ತೆ ಬರುವನು.)

ದಧೀಚಿ:—ಶಚಿಯ ಸಲುವಾಗಿ ನೀವು ಚಿಂತಿಸುವ ಕಾರಣವಿಲ್ಲ. ಅವಳು ನನ್ನ ಶಿಷ್ಯಳು. ಎಂತಹ ಪ್ರಸಂಗ ಬಂದರೂ ಆತ್ಮರಕ್ಷಣೆ ಮಾಡಿಕೊಳ್ಳಬಲ್ಲಳು ಎಲ್ಲಿದ್ದರೂ ಸುರಕ್ಷಿತಳಾಗಿರಬಲ್ಲಳು. ಇನ್ನು ನೀವು ನಡೆಯಿರಿ. ನಾನು ನಿಮ್ಮೆಲ್ಲರನ್ನೂ ನಿಮ್ಮ ನಿಮ್ಮ ಮನೆಗಳಿಗೆ ಮುಟ್ಟಿಸಿ ಬರುವೆನು. (ದಧೀಚಿಯು ಎಲ್ಲರನ್ನು ಕರೆದುಕೊಂಡು ಹೋಗುವನು.)

ಪೌಲೋಮಿಯು ಅರಣ್ಯದಲ್ಲಿ ಯಜ್ಞಕಾಷ್ಠಗಳನ್ನು ಸಂಗ್ರಹಿಸಿಕೊಂಡು ವೇದ

ಗಾಯನ ಮಾಡುತ್ತ ಬರುವಳು. ಪೌಲೋಮಿಯು ಈ ಗಾಯನವು ಋಗ್ವೇದದ ಒಂದನೇ ಅಷ್ಟಕದ ಒಂದನೇ ಮಂಡಲದ ಒಂದನೇ ಅಧ್ಯಾಯದ ಪ್ರಥಮ ಸೂಕ್ತವಾಗಿದೆ.)

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ |
ಹೋತಾರಂ ರತ್ನ ಧಾತಮಂ ॥ ೧ ॥
ಅಗ್ನಿಃ ಪೂರ್ವೇಭಿ ಋಷಿಭಿ ರೀಡ್ಯೋ ನೂತ ನೈರುತ |
ಸ ದೇವಾ ಏಹ ವಕ್ಷತಿ ॥ ೨ ॥
ಅಗ್ನಿನಾ ರಯಿ ಮಶ್ನವತ್ ಪೋಷಮೇವ ದಿವೇ ದಿವೇ
ಯಶಸಂ ವೀರವತ್ತಮಂ ॥ ೩ ॥

(ವೃತ್ರಾಸುರನು ಸಾವಧಾನತೆಯಿಂದ ಬಂದು ಶಚಿಯ ಹಿಂದೆ ನಿಂತಿರುವನು. ಶಚಿಯು ಗಾಯನವು ಮುಗಿಯುತ್ತಲೆ ಕಟ್ಟಿಗೆಯ ತಿಕ್ಕುವಿಕೆಯಿಂದ ಅಗ್ನಿಯು ಹೊತ್ತುವದು. ವೃತ್ರಾಸುರನು ಶಚಿಯ ಮುಂಭಾಗದಲ್ಲಿ ಬಂದು ನಿಲ್ಲುವನು.)

ವೃತ್ರಾಸುರ:—ಇದು ನಿಮ್ಮ ಆ ಅಗ್ನಿಯಲ್ಲವೆ?

ಶಚಿ:—(ಕೌತುಕದಿಂದ ವೃತ್ರಾಸುರನನ್ನು ನೋಡುವಳು. ಮಂದಹಾಸ ಬೀರುವಳು.) ನೀನು ಈ ಸಮಯದಲ್ಲಿ ಇಲ್ಲಿಗೇಕೆ ಬಂದೆ? ಕೇವಲ ಅಗ್ನಿಯನ್ನು ನೋಡಬಂದಿರುವದು ಸಂಭವನೀಯವಲ್ಲ!

ವೃತ್ರಾಸುರ:—ಈ ಅಗ್ನಿಯಿಂದ ನಿಮ್ಮ ಯಜ್ಞಕಾರ್ಯವು ನಡೆಯುವದಲ್ಲವೆ?

---

(೧) ಅಗ್ನಿಯು ಯಜ್ಞದ ಪುರೋಹಿತನು, ಹಾಗು ದೀಪ್ತಿವಂತನು. ಅಗ್ನಿಯು ದೇವತೆಗಳಿಂದ ಆಮಂತ್ರಣ ಹೊಂದಿದ ಋತ್ವಿಕನು, ಹಾಗು ಬಹಳ ರತ್ನಗಳನ್ನು ಧರಿಸಿದವನು. ನಾನು ಅಗ್ನಿಯನ್ನು ಸ್ತುತಿಸುತ್ತೇನೆ.

(೨) ಅಗ್ನಿಯು ಪ್ರಾಚೀನ ಋಷಿಗಳ ಸ್ತೋತ್ರಾರ್ಹನಾಗಿದ್ದನು; ಈಗಿನ ಋಷಿಗಳ ಸ್ತುತಿಗೆ ಪಾತ್ರನಾಗಿದ್ದಾನೆ. ಅವನು ಯಜ್ಞಕ್ಕೆ ದೇವಮಂಡಳಿಯನ್ನು ಕರೆದುತರಲಿ.

(೩) ಅಗ್ನಿಯ ಪ್ರಸನ್ನತೆಯಿಂದ ಧನಲಾಭವಾಗುವದು. ಈ ಧನವು ಕ್ರಮೇಣ ವರ್ಧಿತವಾಗುವದು. ಕೀರ್ತಿಯುಕ್ತವಾಗುವದು. ಇದರಿಂದ ಹಲವರು ವೀರರನ್ನು ಪೋಷಿಸಿಕೊಳ್ಳಲಿಕ್ಕೆ ಬರುವದು.

ಶಚಿ:—ಅಹುದು.

ವೃತ್ರಾಸುರ:—ಕೈಯಲ್ಲಿಯ ಈ ಅಗ್ನಿಯಿಂದ ನಿನ್ನ ಮುಖವು ಕೆಂಪು ಛಾಯೆಯುಳ್ಳದ್ದಾಗಿದೆ. ಬಹು ಸುಂದರವಾಗಿ ತೋರುತ್ತಿದೆ; ಆದರೆ ಈ ಸುಂದರತೆಯು ನಿನಗೆ ಕಾಣದು.

ಶಚಿ:—ನಾನು ಬಹಳೇ ಸುಂದರಳಾಗಿ ಕಾಣುವೆನೆ? ನಿಜವೆ?

ವೃತ್ರಾಸುರ:—ಸುಂದರಿ, ನಾನೇಕೆ ಸುಳ್ಳಾಡಲಿ? ನನ್ನ ಕಣ್ಣಿಗಂತೂ ನೀನು ಬಹು ಮನೋಹರಳಾಗಿ ತೋರುತ್ತಿರುವೆ. ಸೂರ್ಯನಿಗಿಂತಲೂ ನೀನು ಹೆಚ್ಚು ಪ್ರಕಾಶವಾನಳಾಗಿರುವೆ. ಚಂದ್ರನಿಗಿಂತಲೂ ಹೆಚ್ಚು ಕಮನೀಯಳಾಗಿರುವೆ. ಇಂತಹ ನೀನು ಅರ್ಧಾಂಗಿಯಾಗಿ, ಗೃಹವನ್ನಲಂಕರಿಸಿದರೆ ನನ್ನ ಸೌಭಾಗ್ಯಕ್ಕೆ ಎಣೆಯಿಲ್ಲದಾಗಿ ಹೋಗುವದು!....

ಶಚಿ:—ನಾನು ಕೃಷ್ಣವರ್ಣ...........

ವೃತ್ರಾಸುರ:—(ಆಲ್ಹಾದದಿಂದ) ಸುಂದರಿ, ಸರಿಯಾಗಿ ಹೇಳಿದೆ. ನಾನಿಂದು ನಿನಗೆ ಇದೇ ಸಂಗತಿಯನ್ನು ನೆನಪಿಗೆ ತಂದುಕೊಡಲಿಕ್ಕೆ ಬಂದಿದ್ದೇನೆ; ಆದರ ನಾನು ಹೇಳಿಕೊಡುವ ಮೊದಲೇ ನೀನು ನಿಜ ಸಂಗತಿಯನ್ನರಿತುಕೊಂಡಿರುವದನ್ನು ನೋಡಿ ನನಗೆ ವಿಶೇಷ ಆನಂದವಾಯಿತು. ನೀನು ಕೃಷ್ಣಾಂಗಿಯು. ನಾನೂ ಕೃಷ್ಣವರ್ಣದವನು. ಇದು ನಮ್ಮಿಬ್ಬರಿಗೂ ಅಭಿಮಾನಾಸ್ಪದ ಸಂಗತಿಯಾಗಿದೆ. ದೇವತೆಗಳು ತುಷಾರದಂತೆ ಬೆಳ್ಳಬಣ್ಣವುಳ್ಳವರಾಗಿದ್ದಾರೆ. ನಾವು ಪರ್ವತದಂತೆ ಕಪ್ಪುಬಣ್ಣವುಳ್ಳವರಾಗಿದ್ದೇವೆ. ಇದರಲ್ಲಿ ಲಜ್ಜಾಸ್ಪದವಾದದ್ದೇನೂ ಇಲ್ಲ. ದೇವತೆಗಳು ಆಕಳ ಹಾಲು ಕುಡಿದು ಬೆಳೆದಿದ್ದಾರೆ. ನಾವು ನದಿಯ ನೀರು ಕುಡಿದು ದೊಡ್ಡವರಾಗಿದ್ದೇವೆ. ಅವರು ಹಾಲಿನ ಬಣ್ಣವನ್ನು ಹೊಂದಿದ್ದಾರೆ. ನಾವು ನೀರ ಬಣ್ಣವನ್ನು ಪಡೆದಿದ್ದೇವೆ. ಇದಕ್ಕಾಗಿ ನಾವು ಚಿಂತಿಸಬೇಕೆ? ಹೀನರೆಂದು ಭಾವಿಸಿ ಕೊರಗಬೇಕೆ? ಸರ್ವಥಾ ಆಗದು. ಇಷ್ಟೇ ಅಲ್ಲ, ನಾವು ಈ ಭೂಲೋಕದ ಮಾನವರಾಗಿ ಜನಿಸಿರುವದಕ್ಕಾಗಿ

ತುಂಬ ಸಂತೋಷಿಸಬೇಕಾಗಿದೆ.

ಶಚಿ:—ದೇವತೆಗಳಿಗಿಂತಲೂ ನಾವು ಹೆಚ್ಚಿನವರೆ?

ವೃತ್ರಾಸುರ:—ಏಕಾಗಬಾರದು? ಏತರಲ್ಲಿ ಅವರ ಶ್ರೇಷ್ಠತೆಯಿದೆ?-ನಮ್ಮ ಹೀನತೆಯಿದೆ? ಕೇವಲ ಮೈ ಬಣ್ಣದಿಂದ ಶ್ರೇಷ್ಠ-ಕನಿಷ್ಠತೆಗಳನ್ನು ನಿರ್ಣಯಿಸಲಿಕ್ಕಾದೀತೆ? ನಾನಾದರೊ ಕೃಷ್ಣವರ್ಣದವರ ಶ್ರೇಷ್ಠತೆಯನ್ನು ಎಲ್ಲೆಲ್ಲಿಯೂ ಪ್ರಸ್ಥಾಪಿಸಬೇಕೆಂದಿದ್ದೇನೆ. ಇದಕ್ಕನುಗುಣವಾಗಿ ಕಾರ್ಯವನ್ನು ಆರಂಭಿಸಿದ್ದೇನೆ; ಆದರೆ ನನ್ನ ಈ ಕಾರ್ಯದಲ್ಲಿ ನನಗೆ ನಿನ್ನ ನೆರವು ಬೇಕಾಗಿದೆ.

ಶಚಿ:—ನಾನು ನಿಮಗೆ ನೆರವಾಗಬೇಕೆ? ಹೇಗೆ?

ವೃತ್ರಾಸುರ:—ನೀನು ದೈತ್ಯಕುಲ ಲಲಾಮೆಯು. ಗಗನಕ್ಕೆ ಚಂದ್ರಮನು ಹೇಗೊ, ಹಾಗೆ ದೈತ್ಯಜಾತಿಗೆ ನೀನು ಭೂಷಣಭೂತೆಯು. ಪರಮ ಸುಂದರಿಯು. ಅತಿಚದುರೆಯು. ದಾನವರಲ್ಲಿ ನೀನು ಅದ್ವಿತೀಯಳು. ನಿನ್ನನ್ನು ನೋಡುತ್ತಲೆ ನನ್ನ ತಾಪಗಳೆಲ್ಲ ಪರಿಹಾರವಾಗುವವು. ಹೃದಯವು ಆನಂದದಿಂದ ನಲಿದಾಡ ಹತ್ತುವದು. (ಶಚಿಯನ್ನು ಆಲಿಂಗಿಸ ಹೋಗುವನು.)

ಶಚಿ:—(ಭಯದಿಂದ ದೂರ ಸರಿದು) ಬೇಡ. ದೂರಸರಿ! ಹತ್ತಿರ ಬರಬೇಡ!

ವೃತ್ರಾಸುರ:—ಸುಂದರಿ, ದಯದೋರು. ಅನುಗ್ರಹಿಸು.

ಶಚಿ:—ನೀನು ಅಸುರನೆ............

ವೃತ್ರಾಸುರ:—ಆಹುದು. ನಾನು ಅಸುರನು. ನೀನು?

ಶಚಿ:—ನಾನೆ?

ವೃತ್ರಾಸುರ:—ಪೌಲೋಮಿ, ನೀನಾರು?

ಶಚಿ:—ಪೌಲೋಮಿಯು ನಾನಲ್ಲ. ನಾನು ಶಚಿ........

ವೃತ್ರಾಸುರ:—ಹೀಗೆನ್ನದಿರು. ಆ ಪೌಲೋಮಿಯೆ ನೀನಾಗಿರುವೆ.

ಶಚಿ:—ಇಲ್ಲ, ನಾನು ಪೌಲೋಮಿಯಲ್ಲ. ಶಚಿ. ನಾನು ಶಚಿ. (ವೃತ್ರಾಸುರನು ನಗುವನು) ನಾನು ದಧೀಚಿ ಋಷಿಗಳ ಸಾಕುಮಗಳಾಗಿದ್ದರೂ ದೇವತೆಯು. (ಕ್ರೋಧದಿಂದ) ನೀನು ಇಲ್ಲಿಂದ ಹೊರಟುಹೋಗು! ನಿನ್ನ ವಿಷಯವಾಗಿ ನಾನು ದಧೀಚಿ ಋಷಿಗಳನ್ನು ವಿಚಾರಿಸುವೆನು. ಕಪ್ಪುಬಣ್ಣದವನಾದ ನೀನು ದೇವನಲ್ಲ-ನಿಶ್ಚಯವಾಗಿಯೂ ದಾನವನು.

ವೃತ್ರಾಸುರ:—ನಾನು ಕಪ್ಪುಬಣ್ಣದವನಾಗಿರುವದು ನಿಜ; ಆದರೆ ನೀನು?

ಶಚಿ:—ನಾನು ಹಾಲಿನಂತೆ ಶುಭ್ರವರ್ಣೆಯಾಗಿರದಿದ್ದರೂ—ನೀಲವರ್ಣೆಯಾಗಿದ್ದರೂ—ನಾನು ದೇವತೆಯು. ನನ್ನನ್ನು ಕರೆದು ತಂದು ಜೋಪಾನ ಮಾಡಿದ ನನ್ನ ಸಾಕುತಂದೆಗಳು ದೇವತೆಗಳ ದೇವರು. ಇಂದು ಮಾನವರ ಮುಗಳು.

ವೃತ್ರಾಸುರ:—ಒಳ್ಳೆ ವಿಚಿತ್ರವಾದ ಮಾತು! ದಧೀಚಿಯೆ ನಿನ್ನ ತಂದೆಯೆ? ಆಗಬಹುದು! ಈಗ ಅವನೆಲ್ಲಿ?

ಶಚಿ:—ಎಲ್ಲಿಯೊ ಅಡ್ಡಾಡಲಿಕ್ಕೆ ಹೋಗಿದ್ದಾರೆ. ಇನ್ನು ಅಲ್ಪಾವಕಾಶದಲ್ಲಿ ಬರಬಹುದು. ನೀನು ಒಳ್ಳೆಯವನಲ್ಲ. ದೇವತೆಗಳ ಶತ್ರು! ಇಲ್ಲಿರಬೇಡ! ಹೊರಟು ಹೋಗು!

ವೃತ್ರಾಸುರ:—ಬರಲಿ. ಈ ಅವಧಿಯಲ್ಲಿ ನಾನೊಂದು ಮಾತು ನಿನಗೆ ಹೇಳಬೇಕಿದೆ. ನಿಜವಾಗಿಯೂ ನೀನಾರೆಂಬುದನ್ನು ನೀನು ಮರೆತಂತಿದೆ. ನಾನಿದನ್ನು ನಿನ್ನ ನೆನಪಿಗೆ ತಂದುಕೊಡಬೇಕೆಂದಿದ್ದೇನೆ.

ಶಚಿ:—ನಾನಾರೆಂಬುದು ನನಗೆ ಗೊತ್ತಿಲ್ಲವೆ? ನೀನು ಹೇಳಿಕೊಡಬೇಕೆ? ಬೇಡ! ನಿನ್ನ ಹೇಳಿಕೆಯ ಆಗತ್ಯವು ನನಗಿಲ್ಲ!

ವೃತ್ರಾಸುರ:—ನೀನು ಪೌಲೋಮಿಯು ಅಲ್ಲವೆ?

ಶಚಿ:—(ಕೋಪದಿಂದ) ನೀನು ಹುಡುಗಾಟವಾಡುತ್ತಿರುವಿಯಾ? ಮೇಲಿಂದ ಮೇಲೆ ಪೌಲೋಮಿಯೆಂದು ಕರೆಯುವದರಲ್ಲಿ ಉದ್ದೇಶವೇನು?

ನಾನು ಇಲ್ಲಿ ಯಜ್ಞದ ಕೆಲಸಮಾಡುತ್ತಿರುವದರಿಂದ ಶಚಿಯೆಂದು ಪರಿಚಿತಳಾಗಿದ್ದೇನೆ. ಪೌಲೋಮಿಯೆಂಬ ಹೆಸರಿಗಿಂತಲೂ ಶಚಿಯೆಂಬ ಹೆಸರು ನನಗೆ ಹೆಚ್ಚಾಗಿ ಸೇರುತ್ತದೆ.

ವೃತ್ರಾಸುರ:—ನೀನು ದೇವಿಯಲ್ಲವೆ?

ಶಚಿ:— (ಅಭಿಮಾನದಿಂದ) ಒಂದು ಸಲವೇಕೆ? ನೂರೊಂದು ಬಾರಿ ಕೇಳಿದರೂ ನಾನು ಹೌದೆಂದೇ ಉತ್ತರ ಕೊಡುವೆನು!

ವೃತ್ರಾಸುರ:—ನಿಜವಾಗಿಯೂ ನೀನು ದೇವಿಯೋ?

ಶಚಿ:—ಇನ್ನು ನಾನು ನಿನ್ನೊಡನೆ ಮಾತಾಡುವದಿಲ್ಲ!

ವೃತ್ರಾಸುರ:—ಅಗೋ, ಆ ನದಿಯ ನೀರನ್ನು ನೋಡು. ಅದು ಮಾತಾಡಬಲ್ಲದೆ? ನಾನು ಕಪ್ಪುಬಣ್ಣದ್ದಾಗಿರುವೆನೆಂದು ಹೇಳುವದೆ? ಆದರೂ ನಾವು ಅದರ ಬಣ್ಣವನ್ನು ಗೊತ್ತು ಮಾಡಿಕೊಳ್ಳಬಲ್ಲೆವಷ್ಟೇ? ಅದು ಕಪ್ಪು ಬಣ್ಣದ್ದಾಗಿದೆಯೆಂದು ನಿಶ್ಚಿತವಾಗಿ ನಿರ್ಣಯಿಸಬಲ್ಲೆವಷ್ಟೆ?

ಶಚಿ:—ಅದರ ಬಣ್ಣ ಕರಿದಲ್ಲ. ನೀಲ............

ವೃತ್ರಾಸುರ:—ಒಮ್ಮೊಮ್ಮೆ ಕರಿದಾಗಿರುವದು. ಮತ್ತೊಮ್ಮೆ ನೀಲವರ್ಣದ್ದಾಗಿ ತೋರುವದು. ನಿನ್ನ ಕಣ್ಣುಗಳು ಕಪ್ಪು ಬಣ್ಣದವಿವೆ. ನಿನ್ನ ಮೈ ಬಣ್ಣವು ನೀಲವಾಗಿದೆ. ಹಾಲಿನಂತೆ ಶ್ವೇತವರ್ಣದ ದೇಹಧಾರಿಗಳು ದೇವತೆಗಳು; ಹಾಗು ಈ ಜಲದಂತೆ ಯಾರ ಮೈಬಣ್ಣವಿದೆಯೊ ಅವರು ದಾನವರು.

ಶಚಿ:—(ಅವಿಶ್ವಾಸದಿಂದ) ಇದೊಂದು ನಿಶ್ಚಿತ ಸಿದ್ಧಾಂತವೇ ಏನು?

ವೃತ್ರಾಸುರ:—ದೇವತೆಗಳಲ್ಲಿ ನಿನ್ನಂತೆ ಮೈ ಬಣ್ಣವುಳ್ಳವರು ಮತ್ತೆ ಯಾರಾದರೂ ಇರುವರೆ? ಇದ್ದರೆ ಹೇಳು, ನೋಡೋಣ!

ಶಚಿ:—ಯಾರೂ ಇಲ್ಲ! ಹಾಗಾದರೆ ನಾನು............

ವೃತ್ರಾಸುರ:—ನಿಶ್ಚಯವಾಗಿಯೂ ನೀನು ದೇವತೆಗಳ ಬಂಧಿನಿಯು; ದಾನವ ನಂದಿನಿಯು.

ಶಚಿ:—ನಾನು ಅಸುರ ಕುಲದಲ್ಲಿಯೆ ಜನಿಸಿದ್ದು ನಿಜವಿದ್ದರೆ, ಇಲ್ಲಿಗೆ ಹೇಗೆ ಬಂದೆನು? ಯಾರು ತಂದರು?

ವೃತ್ರಾಸುರ:—ನೀನು ಸಹಜ ರೀತಿಯಿಂದ ಇವರಿಗೆ ದೊರೆತವಳಲ್ಲ. ಇವರು ನಿನ್ನನ್ನು ಕಳವಿನಿಂದ ತಂದಿದ್ದಾರೆ. ಅಪಹರಿಸಿಕೊಂಡು ಬಂದಿದ್ದಾರೆ.

ಶಚಿ:—ಹೀಗಿದ್ದರೆ, ಆ ಸಮಯದಲ್ಲಿ ನೀನು ಎಲ್ಲಿದ್ದೆ? ಏನು ಮಾಡುತ್ತಿದ್ದೆ?

ವೃತ್ರಾಸುರ(ವಿಚಲಿತನಾಗಿ):—ಆಗ-ಆ ಸಮಯದಲ್ಲಿ-ನಾನು-

ಶಚಿ:—ನೀನಾಡಿದ್ದೆಲ್ಲವೂ ಸುಳ್ಳು! ಇಲ್ಲಿ ನಿಲ್ಲಬೇಡ! ಬೇಗ ಹೊರಟು ನಡೆ!

ವೃತ್ರಾಸುರ:—ನಾನು ಸುಳ್ಳಾಡುವವನಲ್ಲ ನಾನು ಹೇಳಿದ್ದೆಲ್ಲವೂ ಸತ್ಯವಾಗಿದೆ. ಅನರ್ಥ ಪರಂಪರೆಗಳನ್ನುಂಟು ಮಾಡಿದವನು ದಧೀಚಿ ಋಷಿಯು. ಇವನ ಸಲುವಾಗಿಯೇ ನಾನು ನಿನ್ನನ್ನು ಕಳೆದುಕೊಂಡೆನು. ನಿನ್ನ ತಂದೆಯನ್ನೂ ಕಣ್ಮರೆಮಾಡಿಕೊಂಡೆನು. ದಾನವ ಕುಲ ಸಾರ್ವಭೌಮನಾದ ಪುಲೋಮನನು ನಿನ್ನ ತಂದೆಯು. ನೀನವನ ಮಗಳು ಪೌಲೋಮಿಯು.

ಶಚಿ:—ನನ್ನ ತಂದೆಗಳೆಲ್ಲಿ? ಜೀವಿಸಿರುವರೆ?

ವೃತ್ರಾಸುರ:-ಇಲ್ಲ. ಅವನು ಬದುಕಿಲ್ಲ. ಸತ್ತು ಹೋಗಿರುವನು.

ಶಚಿ:—ಅವರನ್ನು ಸಂಹರಿಸಿದವರಾರು? ಯಾಕೆ ಸಂಹರಿಸಿದರು?

ವೃತ್ರಾಸುರ:—ಇದನ್ನು ಹೇಗೆ ಹೇಳಲಿಕ್ಕಾದೀತು?............

ಶಚಿ:—ದಧೀಚಿ ಋಷಿಗಳೆ ಅವರನ್ನು ವಧಿಸಿದರೆ? ನಿಜವೆ?

ವೃತ್ರಾಸುರ (ಮಾತು ಮರೆಸುವ ಉದ್ದೇಶದಿಂದ) :—ಕಾಲ ಸಪ್ಪಳ ಕೇಳುತ್ತಿದೆ. ಯಾರೊ ಬರುತ್ತಿರುವಂತೆ ತೋರುತ್ತದೆ. ಇನ್ನು ನಾವು ಇಲ್ಲಿರುವದು ಬೇಡ. ನೀನು ನನ್ನೊಡನೆ ಹೊರಟು ಬಿಡು. ನಿನ್ನ

ರಾಜ್ಯಕ್ಕೆ ನಡೆ. ನಿನ್ನ ತಂದೆಯ ಸಿಂಹಾಸನವು ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತಿದೆ. ಪ್ರಜೆಗಳು ನಿನ್ನ ಬರುವಿಕೆಯನ್ನು ನಿರೀಕ್ಷಿಸಿಕೊಂಡಿದ್ದಾರೆ. ನಾನು ನಿನಗೋಸ್ಕರ ಮುಕುಟವನ್ನು ತಯಾರಿಸಿರಿಸಿದ್ದೇನೆ. ಹಲವು ಬಣ್ಣಗಳ ನಾನಾ ಆಕಾರಗಳ ಅತ್ಯುತ್ತಮ ಅಲಂಕಾರಗಳನ್ನು ಮಾಡಿಸಿರಿಸಿದ್ದೇನೆ. ರುಚಿಕರವಾದ ಮಧುವು ಸಿದ್ಧವಿದೆ. ನಿನಗೆ ಹಾಲು ಬೇಕಿದ್ದರೂ ಕೊಡುವೆನು. ನಾನು ನಿನಗೆಂದೇ ದೇವತೆಗಳ ಆಕಳುಗಳನ್ನು ಗೆದ್ದುಕೊಂಡೊಯ್ದು ಕಟ್ಟಿಸಿರುವೆನು. ಸುಂದರಿ, ನಿನಗೆ ಮತ್ತೇನು ಬೇಕು? ನಾನು ಅಲ್ಲಿ ನಿನ್ನ ಅಪೇಕ್ಷೆಗಳೆಲ್ಲವನ್ನೂ ತತ್ಕ್ಷಣದಲ್ಲಿಯೆ ಪೂರ್ಣ ಮಾಡುವೆನು. ನಡೆ, ಹೋಗೋಣ

ಶಚಿ:—(ಮನಸೋತವಳಾಗಿ ಕೊಂಚ ಮುಂದೆ ಹೋಗುವಳು.)

ವೃತ್ರಾಸುರ:—ಅನುಮಾನಿಸದೆ ಬಾ. ನನ್ನ ಕೈಯನ್ನು ಹಿಡಿದುಕೊಳ್ಳು.

ಶಚಿ:—ಆದರೆ........(ಆಶ್ರಮದ ಕಡೆಗೆ ನೋಡುವಳು.)

ವೃತ್ರಾಸುರ:—ಇವರು ನಿನ್ನ ಶತ್ರುಗಳು. ನಾವು ದಾನವರು. ನೀನು ದಾನವ ಕನ್ಯೆಯು. ಇವರು ನಿನ್ನನ್ನು ಮೋಸದಿಂದ ಅಪಹರಿಸಿ ತಂದು ದಾಸಿಯನ್ನಾಗಿ ಮಾಡಿಕೊಂಡಿದ್ದಾರೆ. ನೀನು ಇವರ ಬಂದಿನಿಯು. ಇವರು ತೋರಿಕೆಯಲ್ಲಿ ನಿನ್ನನ್ನು ಬಹಳವಾಗಿ ಪ್ರೀತಿಸುವಂತೆ ನಟಿಸುತ್ತಿರಬಹುದು; ಆದರೆ ಆ ಪ್ರೀತಿಯು ಮನಃಪೂರ್ವಕವಾದದ್ದಲ್ಲವೆಂಬುದನ್ನು ಮರೆಯದಿರು. ಯಾಕೆಂದರೆ ನೀನು ದಾನವಿಯು ಇವರು ದೇವತೆಗಳು. ನಿನಗೂ ಇವರಿಗೂ ರಕ್ತದ ಸಂಬಂಧವು ರವಷ್ಟಾದರೂ ಇಲ್ಲ. ನನ್ನ ಮಾತು ಬೇರೆ. ನಾವೀರ್ವರೂ ದಾನವರು. ಸ್ವಕುಲಾಭಿಮಾನದಿಂದ ಪ್ರೇರಿತನಾದ ನಾನು-ಕೇವಲ ನಾನೊಬ್ಬನೇ ಏಕೆ ಯಾವತ್ತು ದಾನವರು-ನಿನ್ನ ಉದ್ಧಾರಕ್ಕೋಸ್ಕರ ತಮ್ಮ ಜೀವವನ್ನು ಬಲಿಗೊಡಲಿಕ್ಕೂ ಹಿಂದೆಗೆಯರು. ನಿನ್ನ ತಂದೆಯ ಸಿಂಹಾಸನದ ಮೇಲೆ ಕುಳ್ಳಿ

ದಿಸಿ ಸಾಮ್ರಾಜ್ಞಿಯನ್ನಾಗಿ ಮಾಡಲು ಬದ್ಧ ಕಂಕಣರಾದ ಅವರು ನಿನ್ನನ್ನು ದೇವತೆಗಳ ಸೆರೆಯಿಂದ ಪಾರುಮಾಡುವ ಸಮಯದಲ್ಲಿ ಉಂಟಾಗುವ ಎಡರುಗಳನ್ನು ಲಕ್ಷಿಸದಿದ್ದಾರೆ. ನೀನು ನನ್ನೊಡನೆ ಬಂದೆಯಾದರೆ, ನನ್ನ ಮಾತಿನ ಸತ್ಯತೆಯನ್ನು ಮನಗಂಡವಳಾಗಿ ಸಂತೋಷಿಸದಿರಲಾರೆ ಬಾ. ನನ್ನ ಕೈ ಹಿಡಿದು ಮುಂದೆ ನಡೆ ಅಲ್ಲಿ ಯಾರೊ ಬರುತ್ತಿರುವರು. ಬರಲಿ ನಾನವರಿಗೆ ಹೆದರುವದಿಲ್ಲ. ನಿನಗಾಗಿ ಪ್ರಾಣದ ಮಾಯೆಯನ್ನು ತ್ಯಜಿಸಿದ್ದ ನಾನು ಏತಕ್ಕೂ ಹೆದರುವದಿಲ್ಲ. ನಾನೇನು ಹೆರವರಿಗಾಗಿ ಸಾಯಲಿಕ್ಕೆ ಸಿದ್ಧನಾಗಿಲ್ಲ. ಅಸುರ ಸಾಮ್ರಾಟನ ನಂದಿನಿಯಾಗಿ ದೇವತೆಗಳ ಬಂದಿನಿಯಾಗಿದ್ದ ನಿನ್ನ ಉದ್ಧಾರಕ್ಕಾಗಿ ನಾನು ಮರಣವನ್ನು ಗಣಿಸದಿರುವೆನು. ಆಗುವದಾಗಲಿ. ನೀನು ಮಾತ್ರ ನನ್ನೊಡನೆ ಬೇಗ ನಡೆ. (ಶಚಿಯು ವಿಹ್ವಲೆಯಾಗಿ ಕೈಚಾಚುವಳು. ವೃತ್ರಾಸುರನು ಅವಳ ಕೈ ಹಿಡಿದು ಮುಂದೆ ಸಾಗುವನು, ನೇಪಥ್ಯದಲ್ಲಿ ಶಚಿ, ಶಚಿ ಎಂಬ ಧ್ವನಿಯಾಗುವದು. ದಧೀಚಿಯು ಬರುವನು. ಕುಟೀರವನ್ನು ನೋಡುವನು. ಶಚಿ ಇಲ್ಲದಿರುವದನ್ನು ಕಂಡು ಮತ್ತೆ ಹೊರಗೆ ಬರುವನು.)

ದಧೀಚಿ:—ಶಚಿ, ಶಚಿ, ನೀನೆಲ್ಲಿರುವೆ?

ವೃತ್ರಾಸುರ:—(ದೂರದಿಂದಲೆ) ಆ ಪೌಲೋಮಿಯು ಇಲ್ಲಿರುವಳು. ಅಸುರ ನಂದಿನಿಯಾಗಿದ್ದ ಇವಳು ಇಂದು ದೇವತೆಗಳ ಬಂದಿನಿಯಲ್ಲ; ಬಂಧನ ಮುಕ್ತಳು.

ದಧೀಚಿ:—(ಮುಂದೆ ಹೋಗಿ ವೃತ್ರಾಸುರನ ಹತ್ತಿರ ಶಚಿಯು ಇರುವದನ್ನು ನೋಡಿ) ಶಚಿ, ಇದೇನು?

ವೃತ್ರಾಸುರ:—(ಹಿಂದಿರುಗಿ ನೋಡಿ) ಓಹೊ, ದಧೀಚಿಋಷಿಯೇನು? ಒಳ್ಳೆ ಸಮಯಕ್ಕೆ ಬಂದಿರುವೆ! ಅಸುರ ರಾಜನಂದಿನಿಯು ತನ್ನ ತಂದೆಯ ಸಿಂಹಾಸನವನ್ನಲಂಕರಿಸಲಿಕ್ಕೆ ಸಂತೋಷದಿಂದ ಹೋಗುತ್ತಿರುವಳು. ನೀನಿವಳ ಕೊನೆಯ ದರ್ಶನ ತಕ್ಕೊಂಡು ಸಂತುಷ್ಟನಾಗು. ನಮ್ಮ ಈ ಶುಭಯಾತ್ರೆಯು ಮಂಗಳಕರವಾಗಲೆಂದು ಆಶೀರ್ವದಿಸು.

ದಧೀಚಿ:—ದುವೃ್ವತ್ರ ದಾನವನೆ.......(ಮುಂದೆ ಶಬ್ದಗಳು ಹೊರಡ ಲಿಲ್ಲ. ಕ್ಷಣಕಾಲ ಸುಮ್ಮನಿದ್ದು ಶಚಿಯನ್ನು ಕುರಿತು) ಅಮ್ಮಾ, ಇದರ ಇಂಗಿತ ವೇನು? ನಮ್ಮ ಈ ಪರಮ ಶತ್ರುವಿನೊಡನೆ ನೀನೇಕೆ ಹೊರಟಿರುವೆ?

ಶಚಿ:—ಋಷಿವರ್ಯರೆ, ಪರಮ ಶತ್ರುವಾರು? ನಾನು ಅಸುರ ಕನ್ಯೆಯು. ನೋಡಿರಿ, ಹಾಲಿನಂತೆ ನನ್ನ ಮೈ ಬಣ್ಣವು ಬೆಳ್ಳಗಿಲ್ಲ! ನೀವು ನನ್ನ ತಂದೆಗಳಲ್ಲ! ರಾಜಾಧಿರಾಜರಾದ ಪುಲೋಮನರವರು ನನ್ನ ತಂದೆಗಳು. ನಾನು ಹೋಗಿ ಬರುವೆನು. ಅಪ್ಪಣೆ ಕೊಟ್ಟುಕಳುಹಿರಿ.

ದಧೀಚಿ:—ಮಗು, ನೀನು ಮೋಸ ಹೋಗಿರುವೆ! ಹುಚ್ಚಿಯಂತೆ ಬಾಯಿಗೆ ಬಂದ ಹಾಗೆ ಬಡಬಡಿಸುತ್ತಿರುವೆ ಕೊಂಚ ವಿಚಾರಿಸಿ ನೋಡು. ನಿನ್ನನ್ನು ಸಂರಕ್ಷಿಸಿದವನು ನಾನು. ನಿನಗೆ ವಿದ್ಯೆಗಲಿಸಿದವನು ನಾನು. ಈ ದುಷ್ಟದಾನವನು ನನ್ನ ಪ್ರೀತಿಯ ಧನದಂತಿದ್ದ ನಿನ್ನನ್ನು ನನ್ನಿಂದ ಕಸಿ ದೊಯ್ಯಬೇಕೆಂದಿದ್ದಾನೆ! ನೀನಿವನ ಮಾತಿಗೆ ಮರುಳೆಯಾಗಬೇಡ. ಬಾ. ನಾನು ನಿನ್ನನ್ನು ಮತ್ತೆ ಆಶ್ರಮಕ್ಕೆ ಕರೆದೊಯ್ಯುವೆನು (ಶಚಿಯ ಹತ್ತಿರ ಹೋಗಿ ಅವಳನ್ನು ಹಿಡಿದುಕೊಳ್ಳಲಿಕ್ಕೆ ಯತ್ನಿಸುವನು. ವೃತ್ರಾಸುರನು ನಡುವೆ ನಿಂತು ಪ್ರತಿಬಂಧ ಮಾಡುವನು.)

ವೃತ್ರಾಸುರ:—ಓಹೋ! ಋಷಿಯೆ, ನೀನು ಹೀಗೆ ಸನಿಯಕ್ಕೆ ಬರಬೇಡ. ದೂರ ನಿಂತೇ ಮಾತಾಡು

ದಧೀಚಿ:—(ಶಚಿಯನ್ನು ಕುರಿತು) ಅಮ್ಮಾ, ಇಲ್ಲಿ ನೋಡು. (ಕೈ ತೋರುವನು.) ನನ್ನ ಕೈಯ ಈ ಗಾಯಗಳು ಹೇಗಾದವೆಂಬದನ್ನು ಬಲ್ಲೆಯಾ? ಈ ದೈತ್ಯನಿಗೆ ನೀನು ಬೇಕಾಗಿದ್ದೆ. ನನ್ನ ಅನುಮತಿಯಿಲ್ಲದೆ ನೀನು ಕೈವಶಳಾಗಲಾರೆಯೆಂಬುದನ್ನಿವನು ಅರಿತಿದ್ದನು. ಕಾರಣ ಇವನು ನಿನ್ನನ್ನು ತನ್ನ ಸ್ವಾಧೀನಪಡಿಸಬೇಕೆಂದು ನನ್ನ ಮೇಲೆ ಬಲುಮೆ ಮಾಡಿ ದನು. ನಾನು ಒಪ್ಪದಿರಲು, ಈ ಕೈಗಳಲ್ಲಿ ಕಬ್ಬಿಣದ ಮೊಳೆ ಹೊಡಿಸಿದನು. ರಕ್ತವುಪುಟಿಯಿತು. ಸುತ್ತಲಿನ ನೆಲವು ನನ್ನ ಮೈಯ ರಕ್ತದಿಂದ ತೊಯ್ದು

ಹೋಯಿತು. ಆದರೂ ನಾನು ಇವನ ಇಚ್ಛೆಗೆ ಒಪ್ಪಲಿಲ್ಲ. ನಾನು ಇಷ್ಟೆಲ್ಲ ಕಷ್ಟ ಸಹಿಸಿದ್ದು ಯಾರ ಸಲುವಾಗಿ? ನಿನ್ನ ಸಲುವಾಗಿಯಲ್ಲವೆ? ಹೀಗಿದ್ದರೂ ನೀನು.......(ದುಃಖದಿಂದಲೂ ಕ್ರೋಧದಿಂದಲೂ ಮಾತು ಹೊರಡದಾಯಿತು)

ವೃತ್ರಾಸುರ:—ಪೌಲೋಮಿ, ಈ ಮುದಿಹುಚ್ಚನ ಮಾತು ಕೇಳುತ್ತ ನಿಲ್ಲುವದಕ್ಕೆ ನಮಗೆ ಅವಕಾಶವಿಲ್ಲ. ನಡೆ, ಬೇಗನೆ ಹೋಗೋಣ. ನಮ್ಮ ಅಸುರ ಸೈನ್ಯವು ದೇವತೆಗಳ ಆಕಳ ಹಿಂಡನ್ನು ಹಿಡಿದು ತಂದಿದೆ. ದೇವತೆಗಳು ನಮ್ಮ ಸಂಗಡ ಯುದ್ಧ ಹೂಡಿದ್ದಾರೆ. ದಾನವರು ಮಿಗಿಲಾದ ಶೌರ್ಯದಿಂದ ಹೋರಾಡುತ್ತಿದ್ದಾರೆ. ಈ ಯುದ್ಧದಲ್ಲೂ ದಾನವರೇ ಜಯಶಾಲಿಗಳಾಗುವರೆಂಬದರಲ್ಲಿ ತಿಲಮಾತ್ರವೂ ಸಂದೇಹವಿಲ್ಲದಾಗಿದೆ. (ಕ್ಷಣಕಾಲ ಸುಮ್ಮನಿದ್ದು ಕಿವಿಗೊಟ್ಟು ಕೇಳಿ) ದಾನವರ ಜಯಧ್ವನಿಯನ್ನು ಕೇಳಿದೆಯಾ? ಅವರು ಇಂದು ತಮ್ಮ ಶೂರತೆಗೆ ತಕ್ಕ ಪುರಸ್ಕಾರವನ್ನು ನಿನ್ನಿಂದ ಪಡೆದು ಧನ್ಯರಾಗುವರು ನಡೆ.

ದಧೀಚಿ:—ಮಗು, ಹೋಗುವೆಯಾ? ನಿಜವಾಗಿಯೂ ಹೋಗುವೆಯಾ?

ಶಚಿ:—ನಾನು ಹೋಗುವೆನು! ಯಾಕೆ ಹೋಗಲಾಗದು? ಈ ವರೆಗೆ ನೀವು ನನ್ನನ್ನು ಪ್ರತಿಬಂಧದಲ್ಲಿರಿಸಿದ್ದಿರೇಕೆ? ನಾನಾವ ಅಪರಾಧ ಮಾಡಿದ್ದೆನು?

ವೃತ್ರಾಸುರ:—ಸರಿಯಾದ ಉತ್ತರ! ಕೇಳಿದಿರಾ ಮಹರ್ಷಿಗಳೆ? (ಶಚಿಯ ಕೈಹಿಡಿದು) ರಾಜಕನ್ಯೆಯೆ, ನಡೆ. ನಾವು ಬೇಗನೆ ಹೋಗುವದು ಅವಶ್ಯವಾಗಿದೆ.

(ವೃತ್ರಾಸುರನು ಶಚಿಯನ್ನು ಕರೆದುಕೊಂಡು ಹೊರಟನು. ಶಚಿಯು ದಧೀಚಿ ಋಷಿಯನ್ನು ಕಂಗಣ್ಣಿನಿಂದ ನೋಡುತ್ತ ಮುಂದೆ ಸಾಗಿದಳು.)

ದಧೀಚಿ:—ವತ್ಸೆ, ನನ್ನನ್ನು ತ್ಯಜಿಸಿ ಯಾರ ಬೆನ್ನು ಹತ್ತಿ

ಹೊರಟಿರುವೆ?........

ಶಚಿ:—ಯಾರು ನನ್ನ ತಂದೆಯು ಕೊಲೆಗಡಕರೊ ಅವರ ಸಹವಾಸವನ್ನು ತ್ಯಜಿಸಿ, ಅವರ ಸೆರೆಯಿಂದ ಪಾರಾಗಿ, ಯಾರು ನನ್ನನ್ನು ನನ್ನ ತಂದೆಯು ಸಿಂಹಾಸನದ ಮೇಲೆ ಕುಳ್ಳಿರಿಸುವರೊ ಅವರ ಬೆನ್ನು ಹತ್ತಿ ಹೊರಟಿರುವೆನು! ಹೋಗುವೆನು!

ದಧೀಚಿ:—ನಾನು! ನಾನು ನಿನ್ನ ತಂದೆಯು ಹತ್ಯಾಕಾರಿಯು?

ಶಚಿ:—(ವೃತ್ರಾಸುರನನ್ನು ಕುರಿತು) ನೀನು ಈ ಋಷಿಗಳಿಗೆ ತಕ್ಕ ಉತ್ತರವನ್ನು ಹೇಳು!

ದಧೀಚಿ:—ಈ ದಸ್ಯುವು ನನ್ನ ಪ್ರಶ್ನೆಗೆ ಉತ್ತರ ಕೊಡಬೇಕೆ? ಆಗಲಿ ದೈತ್ಯನೆ, ನೀನು ಏನೆಂದು ಹೇಳುವೆ? ರಾಜಾಧಿರಾಜನಾದ ಪುಲೋಮನನ ಕೊಲೆಗಡಕನಾರು?

ವೃತ್ರಾಸುರ:—(ಉನ್ಮತ್ತನಂತಾಗಿ) ಯಾರೆ ಇರಲಿ ಈಗ ಆ ಪ್ರಸ್ತಾಪವು ಬೇಡ. (ಋಷಿಯ ಹತ್ತಿರ ಬಂದು) ನೀನಿನ್ನು ಈ ವಿಷಯದಲ್ಲಿ ಹೆಚ್ಚಾಗಿ ಮಾತಾಡಲಾಗದು; ಸುಮ್ಮನಿರು. ನನ್ನ ಹೇಳಿಕೆಯಂತೆ ವರ್ತಿಸದಿದ್ದರೆ, ನಾನು ಸೇಡು ತೀರಿಸಿಕೊಳ್ಳದೆ ಬಿಡುವವನಲ್ಲ. ತಿಳಿಯಿತೆ? (ಋಷಿಯ ಕಿವಿಯ ಬಳಿಯಲ್ಲಿ ಮೆಲ್ಲನೆ) ನಿಜಸಂಗತಿಯನ್ನು ಪ್ರಕಟಿಸಬೇಡ. ನನ್ನ ಮೇಲೆ ದಯದೋರು.

ಶಚಿ:—ಸುಮ್ಮನಾದೆಯಲ್ಲ! ನೀನು ನನ್ನ ಪ್ರಶ್ನೆಗೆ ಉತ್ತರ ಕೊಡಲಿಕ್ಕೆ ಬೇಕು! ಸುಮ್ಮನಿದ್ದರೆ, ನಾನು ಬಿಡತಕ್ಕವಳಲ್ಲ!

ದಧೀಚಿ:—ನಾನು ಸರಿಯಾದ ಉತ್ತರವನ್ನು ಹೇಳುವೆನು. ಸತ್ಯವನ್ನು ಪ್ರಕಟ ಮಾಡುವೆನು.

ವೃತ್ರಾಸುರ:—(ಕ್ರೋಧದಿಂದ) ಬೇಡ, ನೀನು ಮಾತಾಡುವದು ಬೇಡ! ನಾಲಿಗೆಯನ್ನು ಹೊರದೆಗೆದರೆ, ಕೂಡಲೆ ನಿನ್ನನ್ನು ಸಂಹರಿಸಿ ಬಿಡುವೆನು!........

ಶಚಿ:—(ವೃತ್ರನನ್ನು ಕುರಿತು) ನಿಜ ಸಂಗತಿಯನ್ನು ಕೇಳಿಕೊಳ್ಳಲಿಕ್ಕೆ ಕೋಪವೇಕೆ? ನಾನು ನಿನ್ನನ್ನು ಹೇಗೆ ನಂಬಲಿ? (ಋಷಿಯನ್ನು ಕುರಿತು) ಋಷಿವರ್ಯರೆ, ಹೇಳಿರಿ. ನಿಜಸಂಗತಿಯನ್ನು ನಿರ್ಭಯದಿಂದ ಹೇಳಿರಿ!

ದಧೀಚಿ:—ನಿನ್ನ ತಂದೆಯನ್ನು ಸಂಹರಿಸಿದವನು ದೇವನಲ್ಲ!....
(ವೃತ್ರಾಸುರನು ಅವನ ಬಾಯಿಯ ಮೇಲೆ ಕೈಯಿಡುವನು.)

ಶಚಿ:—(ವೃತ್ರಾಸುರನನ್ನು ಕುರಿತು) ನೀನೆ ನನ್ನ ತಂದೆಯನ್ನು ಕೊಂದಿರುವಿಯಷ್ಟೆ? ನಿಜವಾಗಿ ಹೇಳು!

ವೃತ್ರಾಸುರ:—(ಚಮಕಿತನಾಗುವನು. ಸತ್ಯಾಸತ್ಯಗಳಲ್ಲಿ ಯಾವುದನ್ನು ಹೇಳಬೇಕೆಂಬ ವಿಷಯದಲ್ಲಿ ಸಂದೇಹಗ್ರಸ್ತನಾಗುವನು. ಕ್ಷಣಕಾಲ ಯೋಚಿಸುವನು. ಬಳಿಕ) ಅಹುದು! ನಾನೇ ನಿನ್ನ ತಂದೆಯನ್ನು ಕೊಂದೆನು! (ಅಲ್ಲಿ ನಿಲ್ಲಲಾರದವನಾಗಿ ಹೋಗಿ ಬಿಡುವನು.)

ಶಚಿ:—(ದಧೀಚಿಯ ಪಾದಗಳಮೇಲೆ ಬಿದ್ದು) ಅಪ್ಪಾ, ಮಹಾಪರಾಧಿನಿಯು ನಾನು! ಕ್ಷಮಿಸಿರಿ!

ದಧೀಚಿ:—ಏಳಮ್ಮಾ ಏಳು ದುರಾಚಾರಿಯಾದ ಆ ದೈತ್ಯನು ತನ್ನ ಕಪಟ ವರ್ತನದಿಂದ ನಿನ್ನನ್ನು ಠಕ್ಕಿಸಿದ್ದನು. ನೀನು ನಿಜ ಸಂಗತಿಯನ್ನರಿಯದವಳಾಗಿ ಅವನ ಕಪಟ ನಾಟಕಕ್ಕೆ ಬಲಿಯಾಗುವದರಲ್ಲಿದ್ದೆ. (ಅವಳನ್ನೆಬ್ಬಿಸಿ ಶಿರ ಚುಂಬನ ಮಾಡುವನು.) ನೀನು ಅಸುರನಂದಿನಿಯಾಗಿರುವದು ನಿಜವು; ಆದರೆ ನೀನು ನನ್ನಿಂದ ಸಂರಕ್ಷಣೆ ಹೊಂದಿರುವೆ. ನನ್ನ ಶಿಕ್ಷಣದಲ್ಲಿ ಬಳೆದಿರುವೆ. ವಿದ್ಯೆಯ ಅಧಿದೇವಿಯಾದ ಸರಸ್ವತಿಗಿಂತಲೂ ಕುಶಲಳಿರುವೆ. ಆದುದರಿಂದ ಈಗ ನೀನು ದಾನವಿಯಲ್ಲವಷ್ಟೇ ಅಲ್ಲ; ದೇವಿಯರ ದೇವಿಯಾಗಿರುವೆ. ದೇವರಾಜನಾದ ಇಂದ್ರನೊಬ್ಬನು ಮಾತ್ರ ನಿನಗೆ ತಕ್ಕ ವರನಾಗಿದ್ದಾನೆ. ನಾನು ಅವನೊಡನೆ ನಿನ್ನ ವಿವಾಹ ಮಾಡಿ ನಿಶ್ಚಿಂತನಾಗಬೇಕೆಂದಿದ್ದೇನೆ.

(ಇಂದ್ರನು ಬರುವನು.)

ಇಂದ್ರ:—ಋಷಿವರ್ಯರೆ, ದೈತ್ಯರೊಡನೆ ಹಲವು ಬಾರಿ ಯುದ್ಧ ಮಾಡಿದೆವು ಪ್ರತಿಯೊಂದು ಕಾಳಗದಲ್ಲೂ ಪರಾಜಯ ಹೊಂದಿದೆವು. ಹೀಗಾಗುತ್ತಿರುವುದೇಕೆ? ನಾವು ಗೆಲ್ಲಲೆಬೇಕು! ದಾನವರ ಸೇಡು ತೀರಿಸಿಕೊಳ್ಳಲಿಕ್ಕೆ ಬೇಕು! ಇದಕ್ಕೆ ಯಾವುದೊಂದು ಯುಕ್ತಿಯನ್ನು ಹೇಳಿಕೊಡುವಿರಾ?

ದಧೀಚಿ:—ದೇವರಾಜನೆ, ಕ್ಷಣಕಾಲ ಯುದ್ಧದ ವಿಚಾರವನ್ನು ಮರೆದು ಬಿಡು ಮತ್ತೊಂದು ಮಾತು ಹೇಳುವೆನು ಕೇಳಿಕೊಳ್ಳು. ಇವಳು ದಾನವಚಕ್ರವರ್ತಿಯಾಗಿದ್ದ ಪುಲೋಮನನ ಮಗಳು. ದೇವಾಸುರರಲ್ಲಿ ಚಿರಸ್ನೇಹವನ್ನು ಆಶಿಸಿದ್ದ ಪುಲೋಮನನು ತನ್ನ ಈ ಮಗಳನ್ನು ನಿನಗೇ ಕೊಡಬೇಕೆಂದು ಸಂಕಲ್ಪಿಸಿಕೊಂಡಿದ್ದನು; ಆದರೆ ದೇವತೆಗಳ ಕಡುಹಗೆಯಾಗಿದ್ದ ವೃತ್ರಾಸುರನು ಪುಲೋಮನನ ಈ ಇಚ್ಛೆಯನ್ನು ನೆರವೇರಿಸಗೊಡಲಿಲ್ಲ ಅವನು ಇವಳನ್ನು ತಾನು ಲಗ್ನವಾಗಬೇಕೆಂಬ ಆಶೆಯಿಂದ ಪುಲೋಮನನನ್ನು ನಿರ್ದಯತೆಯಿಂದ ಕೊಂದು ಬಿಟ್ಟನು; ಆದರೆ ನಾನು ಇವಳನ್ನು ಕರೆತಂದು ನನ್ನ ಆಶ್ರಮದಲ್ಲಿಟ್ಟುಕೊಂಡು ವೃತ್ರಾಸುರನ ಆಶೆಯನ್ನು ವ್ಯರ್ಥಗೊಳಿಸಿದೆನು. ಇವಳನ್ನು ನಾನು ನನ್ನ ಆಶ್ರಮದಲ್ಲಿಟ್ಟುಕೊಂಡು ಮಗಳಂತೆ ಸಲುಹಿದ್ದೇನೆ. ವಿದ್ಯಾ-ಬುದ್ಧಿಗಳನ್ನು ಕಲಿಸಿದ್ದೇನೆ. ದೇವತೆಗಳ ರೀತಿ-ನೀತಿಗಳನ್ನು ತಿಳುಹಿಕೊಟ್ಟಿದ್ದೇನೆ. ಇವಳ ಯೋಗ್ಯತೆಯು ಸಾಮಾನ್ಯವಾದ್ದಲ್ಲ ನಿನ್ನ ಹೆಂಡತಿಯಾಗಲಿಕ್ಕೆ ಇವಳು ಸಂಪೂರ್ಣ ಯೋಗ್ಯಳಿದ್ದಾಳೆ. ನೀನಿವಳನ್ನು ಗ್ರಹಿಸಿ ಮಹಾನುಭಾವನಾಗಿದ್ದ ಪುಲೋಮನನ ಕಾಮನೆಯನ್ನು ಪೂರ್ಣ ಮಾಡು. ನಾನು ನನ್ನ ಈ ಶ್ರೇಷ್ಠ ಶಿಷ್ಯಿಣಿಯನ್ನು, ರಾಷ್ಟ್ರೀಯ ಜೀವನದ ಈ ಸಂಕಟಸಮಯದಲ್ಲಿ, ಪ್ರತೀಕಾರದ ಇಚ್ಛೆಯನ್ನು ಚಿರಜಾಗ್ರತವಾಗಿರಿಸಿಕೊಳ್ಳುವುದರ ದ್ಯೋತಕವಾಗಿ ನಿನಗೆ ಸಮರ್ಪಿಸುತ್ತಿರುವೆನು. ಸ್ವೀಕರಿಸು. ನನ್ನ ಆಶೀರ್ವಾದದ ಬಲದಿಂದ, ದೇವತೆ

ಗಳ ಸಾಮೂಹಿಕ ಶಕ್ತಿಯ ಪ್ರಭಾವದಿಂದ, ಈ ಶಚಿಯು ಬೇಗನೆ ನಿನಗೆ ಜಯಶ್ರೀಯಾಗಿ ಪರಿಣಮಿಸುವಳು.

ಇಂದ್ರ:—ಗುರುಗಳೆ, ತಮ್ಮ ಇಷ್ಟವಿದ್ದಂತಾಗಲಿ.

(ದಧೀಚಿಯು ಶಚಿಯ ಕೈಯನ್ನು ಇಂದ್ರನ ಕೈಯಲ್ಲಿಡುವನು. ಉಷೆ ಮೊದಲಾದ ದೇವಿಯರು ಮಂಗಳ ಗೀತವನ್ನು ಹಾಡುತ್ತ ಬರುವರು. ಈ ಸಮಯದಲ್ಲಿ ಚಿಂತಾಕ್ರಾಂತನಾಗಿದ್ದ ವೃತ್ರಾಸುರನು ಮೆಲ್ಲಮೆಲ್ಲನೆ ಬರುವನು.)

ವೃತ್ರಾಸುರ:—ಇಲ್ಲಿ ವಿವಾಹವು ನಡೆದಂತೆ ಕಾಣುತ್ತಿದೆ ಯಾರ ವಿವಾಹ? ವಧುವಾರು? ವರನಾರು? (ಅತ್ತ ನೋಡಿ) ದೇವರಾಜ ಇಂದ್ರನು ವರನು; ಹಾಗು ವಧುವು........(ನೋಡಿ ಮತ್ತಷ್ಟು ವ್ಯಥೆಗೊಳ್ಳುವನು.) ಇದೇನು? ನಾನಿದೇನು ನೋಡುತ್ತಿರುವೆನು? (ಬಾಣಾಹತನಾದಂತೆ ಎದೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುವನು.)

ಇಂದ್ರ:—ಅಸುರನೆ, ಮತ್ತೆ ನನ್ನ ಕೈಯಲ್ಲಿ ಸಿಕ್ಕೆ!

ವೃತ್ರಾಸುರ:—ಸಿಗುವದಕ್ಕಾಗಿಯೆ ಬಂದಿರುವೆನು! ನಿನ್ನನ್ನು ಹುಡುಕಿಕೊಂಡೇ ಬಂದಿರುವೆನು.

(ಇಂದ್ರ-ವೃತ್ರಾಸುರರು ಯುದ್ಧ ಮಾಡುವರು. ಕ್ಷಣಕಾಲದಲ್ಲಿ ಇಂದ್ರನ ಖಡ್ಗವು ಚೂರು ಚೂರಾಗಿ ಹೋಗುವದು. ವೃತ್ರಾಸುರನು ತನ್ನ ಅಸಿಯನ್ನು ಇಂದ್ರನ ಎದೆಯಲ್ಲಿ ತಿವಿಯ ಹೋಗುವನು. ಶಚಿಯು ಅಯ್ಯೋ, ಘಾತವಾಯಿತು-ಘಾತವಾಯಿತು ಎಂದು ಆರ್ತನಾದ ಮಾಡುವಳು. ವೃತ್ರಾಸುರನು ಚಮಕಿತನಾಗಿ ಅಸಿಯನ್ನು ಹಿಂದಕ್ಕೆ ತಕ್ಕೊಳ್ಳುವನು.)

ವೃತ್ರಾಸುರ:—ಆಶ್ಚರ್ಯ! ಪರಮಾಶ್ಚರ್ಯ! ಅಸುರನಂದಿನಿಯು ದೇವರಾಜನಿಗಾಗಿ ಶೋಕಿಸಬೇಕೆ? (ಶಚಿಯನ್ನು ಕುರಿತು) ಪೌಲೋಮಿ, ಏಕೆ ಅಳುತ್ತಿರುವೆ?

ಶಚಿ:—ಇವರು ನನ್ನ ಪತಿಗಳು!

ವೃತ್ರಾಸುರ:—ಅಸುರರು? ಅಸುರರಿಗೂ ನಿನಗೂ ಏನೂ ಸಂಬಂಧವಿಲ್ಲವೆ? ನೀನು ಅಸುರರ ಹಿತವನ್ನು ನೋಡುವದಿಲ್ಲವೆ? ಅಸುರ

ರಾದರೂ ನಿನ್ನನ್ನು ತಮ್ಮ ಸರ್ವಸ್ವರೆಂದು ತಿಳಿದಿದ್ದಾರೆ. ನಿನ್ನನ್ನು ತಮ್ಮ ಸಾರ್ವಭೌಮಿನಿಯನ್ನು ಮಾಡಿಕೊಂಡು ಪೂಜಿಸಲಿಕ್ಕೆ ಸಿದ್ಧರಿದ್ದಾರೆ. ಆದರೆ ನೀನು? ನೀನು ದೇವತೆಗಳನ್ನು ಪ್ರೀತಿಸಿ, ದೇವರಾಜನನ್ನು ವರಿಸಿರುವೆ. ದೇವತೆಗಳ ಹಿತವನ್ನು ಚಿಂತಿಸಿ, ದಾನವರ ಒಳಿತನ್ನು ಕಣ್ತೆರೆದು ನೋಡಲಾರದವಳಾಗಿರುವೆ. ಆಗಲಿ. ನಿನಗೋಸುಗ ನಾನು ಈ ದೇವರಾಜನಿಗೆ ಜೀವದಾನ ಮಾಡಿರುವೆನು. ನಿನ್ನೀ ಪತಿಯು ನಿನಗಾಗಿ ಒದ್ದುಕಿರಲಿ

(ಅಸುರ ಸೈನಿಕರು ಬರುವರು.)

ವೃತ್ರಾಸುರ(ತನ್ನ ಸೈನಿಕರನ್ನುದ್ದೇಶಿಸಿ):—ಈ ದೇವರಾಜನನ್ನು ಸೆರೆ ಹಿಡಿದುಕೊಂಡು ನಡೆಯಿರಿ.

ಇಂದ್ರ:—ದಾನವರಾಜನೆ, ನಾನು ಒಂದಿಲ್ಲೊಂದು ದಿನ ಇದರ ಸೇಡು ತೀರಿಸಿಕೊಳ್ಳುವೆನು!

ವೃತ್ರಾಸುರ:—ಸೇಡು ತೀರಿಸಿಕೊಂಡೇ ಬಿಡುವೆಯಾ? ಆಗಲಿ. ನಾನು ಬೇಡೆನ್ನುವದಿಲ್ಲ!(ಉಪಹಾಸ ಸೂಚಕ ನಗುವನ್ನು ನಗುವನು.)ಹೇಡಿಯೆ, ಭವಿಷ್ಯತ್ಕಾಲದಲ್ಲಿ ನೀನು ನಿನ್ನ ಶೂರತೆಯಿಂದ ತೀರಿಸಿಕೊಳ್ಳಲಿರುವ ಆ ಸೇಡಿಗೆ ನಾನು ಭಯಗೊಂಡಿಲ್ಲ. ದುಃಖಿತನಾಗಿಲ್ಲ; ಆದರೆ ಇಂದು ನೀನು ಯಾವುದನ್ನು ಕಸಿದುಕೊಂಡು ನಿನ್ನದನ್ನಾಗಿ ಮಾಡಿಕೊಂಡೆಯೊ, ತನ್ಮೂಲಕ ನನ್ನ ಮನಸ್ಸಿನ ಮೇಲೆ ಬಲವಾದ ಆಘಾತ ಮಾಡಿದೆಯೊ ಇದಕ್ಕಾಗಿ ನಾನು ಅತ್ಯಂತ ವ್ಯಥೆಗೊಂಡಿದ್ದೇನೆ! ಮರ್ಮಾಹತನಾಗಿ ಹೋಗಿದ್ದೇನೆ! ನೀನಿಂದು ದಾನವರ ಕುಲದೀಪವನ್ನು ಕಸಿದುಕೊಂಡಿರುವೆ! ನನ್ನನ್ನು ಅಂಧಕಾರ ಸಾಗರದಲ್ಲಿ ಮುಳುಗಿಸಿರುವೆ! ಹೃದಯಸ್ಥ ಪ್ರಕಾಶವನ್ನು ನೊಂದಿಸಿಬಿಟ್ಟಿರುವೆ! ನಾನಿದನ್ನೆಂತು ಸಹಿಸಿಕೊಳ್ಳಲಿ?....

ಇಂದ್ರ:—ನೀನೇನು ನಮಗೆ ಸಾಮಾನ್ಯ ಆಘಾತ ಮಾಡಿರುವೆಯಾ? ನೀನು ನಮ್ಮ ದೇವಭೂಮಿಯನ್ನು ಕಸಿದುಕೊಂಡಿರುವೆ!

ಯಜ್ಞದ ಅಗ್ನಿಯನ್ನು ನೊಂದಿಸಿರುವೆ! ದೇವಭೂಮಿಯನ್ನು ದೇವತೆಗಳ ರಕ್ತದಲ್ಲಿ ಮುಳುಗಿಸಿ ಬಿಟ್ಟಿರುವೆ!

ವೃತ್ರಾಸುರ:—ಇದು ದೇವಭೂಮಿಯೆ? ಅದೇಕೆ? ನಮ್ಮದೇ ಕಾಗಬಾರದು? ವಸುಂಧರೆಯು ವೀರಭೋಗ್ಯಳು. ನಾವು ನಮ್ಮ ಶೌರ್ಯ ದಿಂದ ಈ ಭೂಮಿಯನ್ನು ಗೆದ್ದುಕೊಂಡು ರಾಜ್ಯವಾಳುತ್ತಿರುವೆವು; ಆದರೆ ನಾವು ನಿಮ್ಮಂತೆ ರಾಕ್ಷಸೀಯ ಮಹತ್ವಾಕಾಂಕ್ಷಿಗಳಲ್ಲ. ಎಲ್ಲವೂ ನಮ್ಮದೇ ಆಗಿರಬೇಕು, ಅನ್ಯರಿಗೇನೂ ಇರಬಾರದು ಎಂಬ ದುರಿಚ್ಛೆ ಯನ್ನು ಧರಿಸಿದವರಲ್ಲ ಸರಿಯಾದ ಮಾರ್ಗದಿಂದ ಒಪ್ಪಂದ ಮಾಡಿಕೊ ಳ್ಳಲಿಕ್ಕೆ ನಾನು ಸದಾ ಸಿದ್ಧನಿರುವೆನು.

ಇಂದ್ರ:—ಸರಿಯಾದ ಮಾರ್ಗವೆಂದರೆ ಅದಾವುದು?

ವೃತ್ರಾಸುರ:—ಈ ಭೂಮಿಯು ಹೇಗೆ ನಿಮಗೆ ಮಾತೃಭೂಮಿ ಯಾಗಿದೆಯೊ ಹಾಗೆಯೆ ನಮಗೂ ಆಗಿದೆ. ಈ ಭೂಮಿಯಲ್ಲಿ ದೇವಾ ಸುರರಿಗೆ ಸಮಾನ ಹಕ್ಕುಗಳಿರುವದು ನ್ಯಾಯವಾದ್ದು. ನೀನು ದಾನವ ರಿಗೂ ಸಮಾನ ಹಕ್ಕುಗಳಿವೆಯೆಂಬುದನ್ನು ಒಪ್ಪಿದರೆ, ನಾನು ಒಪ್ಪಂದ ವನ್ನು ಸಮ್ಮತಿಸುವೆನು. ಯುದ್ಧವು ನಿಂತುಹೋಗಲಿ. ಆಗುತ್ತಿರುವ ಪ್ರಾಣಹಾನಿಯು ತಡೆದು ಹೋಗಲಿ. ದೇವದಾನವರು ಸಮಾನತೆಯಿಂ-ದಿದ್ದು ಸುಖಿಸಲಿ!

ಇಂದ್ರ:—ನಿನಗೆ ಸಮಾನ ಅಧಿಕಾರವೆ? ಅಸುರರಿಗೆ ದೇವತೆಗಳ ಸಮಾನ ಅಧಿಕಾರವೆ? ಆಗದು! ದೇವತೆಗಳು ಒಂದಿಲ್ಲೊಂದು ದಿನ ದಾನ ವರನ್ನು ಈ ದೇವಭೂಮಿಯಿಂದ ಹೊಡೆದೋಡಿಸಿ ಬಿಡುವರು! ಈ ದೇವಭೂಮಿಯನ್ನು ಸಂಪೂರ್ಣ ತಮ್ಮ ಅಧಿಕಾರಕ್ಕೊಳಪಡಿಸಿಕೊಂಡು ನೆಮ್ಮದಿಯನ್ನು ಪಡೆಯುವರು!

ವೃತ್ರಾಸುರ:—ಹಲವು ಕಾಳಗಗಳಲ್ಲಿ ಸೋತಿದ್ದರೂ, ನಿನ್ನ ಗರ್ವಹರಣವಾಗಿಲ್ಲವೆ? ದೇವತೆಗಳ ದರ್ಪವು ತಗ್ಗಿಲ್ಲವೆ? ಆಗಲಿ. ನಿಮ್ಮ

ತೊಳಲಿಕೆಯನ್ನು ತೀರಿಸಿಕೊಳ್ಳಲಿಕ್ಕೆ ನಾನು ಬೇಡೆನ್ನುವದಿಲ್ಲ ಅಗೋ, ಅಲ್ಲಿ ನೋಡು. ನನ್ನ ಸೈನಿಕರು ನಿನ್ನ ನಚ್ಚಿನ ದೇವತೆಗಳನ್ನು ಸೆರೆ ಹಿಡಿದುಕೊಂಡು ಬರುತ್ತಿರುವರು. ಚನ್ನಾಗಿ ನೋಡು. ತಲೆಬಾಗಿಸು.

(ಅಸುರ ಸೈನಿಕರು ಕೆಲವರು ದೇವತೆಗಳನ್ನು ಬಂಧಿಸಿ ತರುವರು)

ಎಲ್ಲ ದೇವತೆಗಳು:—ಸೇಡು! ಸೇಡು! ದೈತ್ಯನೆ, ಇದರ ಪ್ರತೀಕಾರವನ್ನು ನೀನು ಒಂದಿಲ್ಲೊಂದು ದಿನ ಭೋಗಿಸಲೇ ಬೇಕು!

ವೃತ್ರಾಸುರ:—ಮುಂದಿನ ಕಾಲದಲ್ಲಿ ಒಂದಿಲ್ಲೊಂದುದಿನ ಸೇಡು ತೀರಿಸಿಕೊಳ್ಳತಕ್ಕವರಿರುವಿರಷ್ಟೆ? ಅವಶ್ಯವಾಗಿ ತೀರಿಸಿಕೊಳ್ಳಿರಿ! ನಾನು ಬೇಡೆನ್ನುವದಿಲ್ಲ! ಪ್ರತಿಬಂಧ ಮಾಡುವದಿಲ್ಲ! ಆದರೆ ನಾನು ಮಾತ್ರ ಇಂದೇ ಸೇಡು ತೀರಿಸಿಕೊಳ್ಳಬೇಕೆಂದಿದ್ದೇನೆ! ಯಾರ ಮೇಲೆ ಸೇಡು ತೀರಿಸಿಕೊಳ್ಳಲಿ? ನಿಮ್ಮಲ್ಲಿಯ ಯಾವನು ನನ್ನ ಹೃದಯಕ್ಕೆ ಸಹಿಸಲಶಕ್ಯವಾದ ನೋವನ್ನುಂಟು ಮಾಡಿರುವನು? ಅವನ ಹೆಸರು ಹೇಳಿರಿ!

ದಧೀಚಿ:—ಇದರ ಉತ್ತರವನ್ನು ನಾನು ಕೊಡಬಲ್ಲೆನು. ನೀನು ಇಂದಿನ ದಿವಸ ಎಲ್ಲರಿಗಿಂತ ನನ್ನ ಮೇಲೆ ಹೆಚ್ಚಾಗಿ ಕೋಪಗೊಂಡಿರುವದು ಸ್ವಾಭಾವಿಕವಾಗಿದೆ; ಆದರೆ ನಿನ್ನ ಈ ಸಿಟ್ಟು ಸರಿಯಾದ್ದಲ್ಲ. ಯಾವನು ಕನ್ಯಾಪಿತನನ್ನು ನಿರ್ದಯತೆಯಿಂದ ವಧಿಸಿರುವನೋ, ಅವನು ಅವಳ ಕೈಹಿಡಿಯ ಬಯಸುವದು ಅನ್ಯಾಯವಾದ್ದು. ನಾನು ಈ ಅನುಚಿತ ಕಾರ್ಯವನ್ನು ತಡೆದು ನನ್ನ ಕರ್ತವ್ಯವನ್ನು ಮಾಡಿದ್ದೇನೆ. ಇದಕ್ಕಾಗಿ ನೀನು ನನ್ನನ್ನು ಶಿಕ್ಷಿಸುತ್ತಿದ್ದರೆ ಶಿಕ್ಷಿಸು. ಮನಬಂದಂತೆ ದಂಡಿಸು. ನಾನು ಬೇಡೆನ್ನುವದಿಲ್ಲ. ನಿನ್ನ ಆ ಶಿಕ್ಷೆಯು ಎಷ್ಟೆ ಕಠೋರವಿದ್ದರೂ ನಾನದನ್ನು ಶಾಂತತೆಯಿಂದ ಸಹಿಸಿಕೊಳ್ಳಲು ಸಿದ್ಧನಿದ್ದೇನೆ; ಆದರೆ ನಿನ್ನ ಈ ಅತ್ಯಾಚಾರದಿಂದ ನಿನಗೆ ಹಿತವಾಗದಿಷ್ಟೆ ಅಲ್ಲ; ಭಯಂಕರ ಹಾನಿಯಾಗುವದೆಂಬದನ್ನು ಮಾತ್ರ ಮರೆಯದಿರು ರಾಜನ ಅವನತಿಗೆ ಪೂರ್ವಜನ್ಮಾರ್ಜಿತ ಪುಣ್ಯದ ಹ್ರಾಸವೂ ಈ ಜನ್ಮದ ಪಾಪದ ಮೇರೆ ಮೀರುವಿ

ಕೆಯೂ ಅವಶ್ಯವಾದ್ದು. ಅವನತಿಯ ದಾರಿಯಲ್ಲಿದ್ದ ನೀನು ಪಾಪದ ಕಾರ್ಯಗಳನ್ನೆ ಮಾಡಬೇಕಿದೆ. ಧಾರ್ಮಿಕ ಜನರ ಮೇಲೆ ಅನ್ಯಾಯವನ್ನೂ ಅತ್ಯಾಚಾರವನ್ನೂ ಮಾಡಬೇಕಾಗಿದೆ. ನಿನ್ನ ಈ ಪ್ರವೃತ್ತಿಯನ್ನು ತಡೆಯಲಿಕ್ಕೆ ನಾನೆಷ್ಟರವನು? ಆಗು-ಹೋಗುಗಳು ನಡೆಯತಕ್ಕವೆ! ನಡೆದು ಹೋಗಲಿ! ನಿನ್ನ ಅತ್ಯಾಚಾರದಿಂದ ದೇವತೆಗಳು ವಿಶೇಷ ಕೋಪಗೊಳ್ಳುವರು. ಅವರ ಮೈಯೊಳಗಿನ ತಣ್ಣಗಿನ ರಕ್ತವು ಬೆಚ್ಚಗಾಗಿ ಒತ್ತರದಿಂದ ಹರಿಯಹತ್ತುವದು. ಈಗಲೂ ದೇಶಾತ್ಮಬೋಧೆಯಿಲ್ಲದವರಾಗಿ ಗಾಢನಿದ್ರೆಯಲ್ಲಿದ್ದ ಕೆಲವರು ದೇವತೆಗಳು ಎಚ್ಚತ್ತು ಜಾಗೃತಿ ಹೊಂದುವರು. ಸಂದೇಹಕ್ಕೊಳಗಾಗಿ ಹಾಗೆ-ಹೀಗೆ ವಿಚಾರಿಸುತ್ತ ಕಾಲ ಕಳೆಯುತ್ತಿದ್ದ ಹಲವರು ದೇವತೆಗಳು ಸಂದೇಹಶೂನ್ಯರಾಗಿ ಪ್ರತೀಕಾರಕ್ಕೆ ಸಿದ್ಧರಾಗುವರು. ಇದರಿಂದ ನಿನ್ನ ಶಿಕ್ಷೆಯು ಸಾರ್ಥಕವಾಗುವದು. ನನ್ನ ಕ್ಲೇಶಾನುಭವವೂ ಸಾರ್ಥಕವಾಗುವದು.

ಎಲ್ಲ ದೇವತೆಗಳು:— ಈ ಋಷಿವರ್ಯರ ಮೇಲೆ ನಡೆಯುತ್ತಿದ್ದ ಪೀಡೆಯನ್ನು ನೋಡಿ ನಾವು ಸಹಿಸಲಾರೆವು!

ವೃತ್ರಾಸುರ:—ಹೀಗೋ! ನಾನು ಈ ಋಷಿಯನ್ನು ಪೀಡಿಸಿದರೆ, ನೀವೇನು ಮಾಡುವಿರಿ? ಪರಿಹರಿಸುವ ಶಕ್ತಿಯು ನಿಮಗಿದೆಯೆ? (ಕ್ಷಣಕಾಲ ಸುಮ್ಮನಿರುವನು.) ನನ್ನ ಬಂದಿಗಳಾಗಿದ್ದ ನೀವು ಗರ್ವದ ಮಾತುಗಳನ್ನಾಡಕೂಡದು. ಸುಮ್ಮನಿರಿ! (ತುಸ ಹೊತ್ತು ಯೋಚಿಸುವನು.) ಋಷಿಯೆ, ನಾನಿಂದು ದಬ್ಬಾಳಿಕೆಯ ನೂತನ ಉದ್ದೇಶವನ್ನು ನಿನ್ನ ಮುಖದಿಂದ ಕೇಳಿಕೊಂಡಂತಾಯ್ತು! ದಬ್ಬಾಳಿಕೆಯಿಂದ ವೈರಿಗಳು ತಮ್ಮ ಗಾಢನಿದ್ರೆಯಿಂದ ಎಚ್ಚರಿಯುವರೇ? ಅವರಲ್ಲಿ ಅಡಗಿದ್ದ ಶಕ್ತಿಯು ಪ್ರಕಟವಾಗಲವಕಾಶ ಹೊಂದುವದೆ? ಹೀಗಿದ್ದರೆ, ನಾನು ನಿನ್ನನ್ನು ಶಿಕ್ಷಿಸುವದಿಲ್ಲ ಬಂಧನ ಮುಕ್ತನು ನೀನು; ದೇಶಾದತ್ತ ಹೋಗಬಹುದು. (ಮತ್ತೆ ಯೋಚಿಸುವನು.) ಅಹುದು!.... ನಿಜವಾಗಿಯೂ ನೀನು ಬಂಧನ

ಮುಕ್ತನಾಗಿರುವೆ!....ಹೊರಟು ಹೋಗು............

ಇಂದ್ರ:—ದೈತ್ಯರಾಜನೆ, ನಿನ್ನ ಈ ಸುಬುದ್ಧಿಯು ಸಲುವಾಗಿ ನಾನು ನಿನ್ನನ್ನು ಅಭಿನಂದಿಸುವೆನು.

ವೃತ್ರಾಸುರ:—(ಯೋಚನಾ ತಂದ್ರಿಯಿಂದೆಚ್ಚತ್ತು)ಯಾರು? ಮಾತಾಡಿದವರಾರು? ಇಂದ್ರನೆ? ದೇವರಾಜನೆ, ನನ್ನ ಉಪಹಾಸ ಮಾಡಿದೆಯಾ? ನೀನು ನನ್ನ ಸೆರೆಯಿಂದ ಪಾರಾದವನಲ್ಲ! ನಾನು ನಿನ್ನ ಸಲುವಾಗಿ ಬಂಧಮುಕ್ತತೆಯು ಅಪ್ಪಣೆಯಿತ್ತವನಲ್ಲ! ದೇವತೆಗಳೆ, ಮರಣಕ್ಕೆ ಸಿದ್ಧರಾಗಿರಿ! ದಾನವ ಸೈನಿಕರೆ, ನಿಮ್ಮ ಖಡ್ಗಗಳನ್ನೆತ್ತಿರಿ! ಈ ದೇವತೆಗಳ ಶಿರಗಳನ್ನು ಹಾರಿಸಿ ಬಿಡಿರಿ.

ಶಚಿ:—(ಇಂದ್ರನಿಗೆ ತೆಕ್ಕೆಬಿದ್ದು)ದೇವತೆಗಳೆ, ನನಗೋಸುಗ ಇಂದು ನೀವೆಲ್ಲರೂ ಈ ದೈತ್ಯನಕೋಪಕ್ಕೆ ಬಲಿಯಾಗಬೇಕಾಯಿತು (ದುಃಖಿಸುವಳು!)

ವೃತ್ರಾಸುರ:—ಕುಹಕಿನೀ, ನೀನು ದುಃಖಿಸುವದಾರ ಸಲುವಾಗಿ? ಸಕಲ ದೇವತೆಗಳ ಈ ದುರ್ದೆಶೆಗಾಗಿ ನಿನಗೆ ನಿಜವಾಗಿಯೂ ದುಃಖವಾಗಿದೆಯೆ? ಇಲ್ಲ! ಇದು ನಿನ್ನ ತೋರಿಕೆಯ ವಿಲಾಪವು. ಇಂದಿನ ಮಧುಯಾಮಿನಿಯನ್ನು ಪತಿಯೊಡನೆ ಸರಸ-ಸಲ್ಲಾಪಗಳಲ್ಲಿ ಕಳೆಯುವ ಸುಯೋಗವು ದೊರೆಯಲಿಲ್ಲವಲ್ಲ ಎಂಬ ವಿಚಾರದಿಂದ ನೀನು ಮನಃಪೂರ್ವಕವಾಗಿಯೂ ದುಃಖಿಸುತ್ತಿರಬಹುದು! ಅಲ್ಲವೆ? ನಾನಾಡಿದ್ದು ನಿಜವಿದ್ದರೆ, ಹಾಗೆ ಸ್ಪಷ್ಟವಾಗಿ ಹೇಳು. ನಾನು ನಿನ್ನ ಈ ಇಂದ್ರದೇವನನ್ನು ನಿನ್ನೊಡನೆ ಶಯ್ಯಾಗೃಹಕ್ಕೆ ಕಳುಹಿಕೊಡುವೆನು!

ಶಚಿ:—ದಾನವನೆ, ನಾಲಿಗೆಯನ್ನು ಬಿಗಿ ಹಿಡಿದು ಮಾತಾಡು!

ವೃತ್ರಾಸುರ:— ಇನ್ನೂ ನಿನ್ನ ಸೆಡವು ಕುಗ್ಗಿಲ್ಲವೆ? ಆಗಲಿ! ಪೌಲೋಮಿ, ನಾನಿಂದು ಈ ಸಮಯದಲ್ಲಿ ಇಲ್ಲಿರುವ ದೇವತೆಗಳಲ್ಲಿ ನಿನ್ನ ವಿನಂತಿಯ ಮೇರೆಗೆ ಒಬ್ಬನನ್ನು ಮಾತ್ರ ಬಿಟ್ಟು ಕೊಡುವೆನೆಂದು ಹೇಳಿದರೆ, ನೀನಾವ ಹೆಸರನ್ನುಚ್ಚರಿಸಬಹುದು?

ಶಚಿ:—ನೀನು ಹೀಗೆ ಪ್ರಶ್ನೆ ಕೇಳಲಾಗದು? ನಾನಿದರ ಉತ್ತರವನ್ನು ಹೇಳಲಾಗದು.

ವೃತ್ರಾಸುರ:—ಅದೇಕೆ ಹೇಳಲಾಗದು? ನಾನಿದರ ಉತ್ತರವನ್ನು ನಿನ್ನಿಂದ ಹೊರಡಿಸಿಯೇ ಬಿಡಬೇಕೆಂದಿದ್ದೇನೆ. ಪೌಲೋಮಿ, ಕೇಳು. ದೈತ್ಯರಾಜನಾಗಿದ್ದ ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವದೇನಂದರೆ............

ದಧೀಚಿ:—ಸೂರ್ಯಾಸ್ತ ಸಮಯವು ಸಮೀಪಿಸಿದೆ. ಸಾಯಂಸಂಧ್ಯಾವಂದನೆಗಾಗಿ ನಾನು ಹೊರಡಬೇಕಾಗಿದೆ. ಕಾರಣ ನಿಮ್ಮ ವಾಗ್ಯುದ್ಧ ಕೇಳುತ್ತ ನಿಲ್ಲಲಿಕ್ಕೆ ನನಗೆ ಅವಕಾಶವಿಲ್ಲದಾಗಿದೆ ನಾನು ನದಿಗೆ ಹೋಗುವೆನು.

ವೃತ್ರಾಸುರ:—ಒಳ್ಳೇದು ಸ್ನಾನಕ್ಕೆ ಹೊರಡಬಹುದು. ಆ ಪೂರ್ವದಲ್ಲಿ ನನ್ನ ಪ್ರತಿಜ್ಞೆಯನ್ನು ಕೇಳಿಕೊಂಡು ಹೋಗು. ದೈತ್ಯರಾಜನಾಗಿದ್ದ ಈ ವೃತ್ರಾಸುರನು ಪ್ರತಿಜ್ಞೆ ಮಾಡಿ ಹೇಳುವದೇನಂದರೆ.... (ಕ್ಷಣಕಾಲ ಯೋಚಿಸಿ ಬಳಿಕ) ಈ ಋಷಿಯು ಸ್ನಾನಕ್ಕಾಗಿ ನದಿಗೆ ಹೋಗಲೇಬೇಕಲ್ಲವೆ?

ದಧೀಚಿ:—ಈ ಸಮಯದಲ್ಲಿ ನಾನು ಸ್ನಾನವನ್ನು ಮಾಡಲಿಕ್ಕೇಬೇಕು.

ವೃತ್ರಾಸುರ:—ನೀನು ಸ್ನಾನವನ್ನು ಮಾಡಲೇ ಬೇಕಾಗಿರುವಾಗ ನಾನು ನಿನ್ನ ಸ್ನಾನದ ಮುಖಾಂತರವಾಗಿಯೇ ನನ್ನ ಪ್ರತಿಜ್ಞೆಯನ್ನು ಪೂರಿಸಬೇಕೆಂದಿದ್ದೇನೆ. ಪೌಲೋಮಿಯನ್ನು ಪರೀಕ್ಷಿಸಬೇಕೆಂದಿದ್ದೇನೆ. ನನ್ನ ಈ ಪರೀಕ್ಷೆಯು ನಿಮಗೆಲ್ಲರಿಗೂ ಪರಮ ಕೌತುಕಾಸ್ಪದವೆನಿಸದಿರದು!............

ದಧೀಚಿ:—ವೇಳೆಯು ಮೀರುತ್ತಿದೆ. ನಾನು ಹೋಗುವೆನು ....

ವೃತ್ರಾಸುರ:—ಕುಸ ತಡೆ. ನನ್ನ ಪ್ರತಿಜ್ಞಾವಾಣಿಯನ್ನು

ಕೇಳಿಕೊಳ್ಳು. ಸ್ನಾನಕ್ಕಾಗಿ ನದಿಗೆ ಹೋಗಿದ್ದ ನೀನು ನೀರಲ್ಲಿ ಮುಳುಗಿ ಏಳುವೆಯಷ್ಟೆ? ಈ ಅಲ್ಪಾವಧಿಯಲ್ಲಿ ಪೌಲೋಮಿಯು ಸೂಚಿಸಿದ ದೇವನು ಆ ಸೇತುವೆಯನ್ನು ದಾಟಿ ಪಾರಾಗಲಿ. ಅವನು ನನ್ನ ಬಂಧನದಿಂದ ಮುಕ್ತನು. ನೀನು ಮುಳುಗಿ ಎದ್ದ ಬಳಿಕ ಈ ಸ್ಥಳದಲ್ಲಿ ಉಳಿದಿದ್ದ ದೇವತೆಗಳೆಲ್ಲ ದಾನವರ ಖಡ್ಗಕ್ಕೆ ಬಲಿಯಾಗುವದು ನಿಶ್ಚಿತವಾದದ್ದು! ಪೌಲೋಮಿ.......ಅಲ್ಲ ಇಂದ್ರಾಣಿ, ನನ್ನ ಈ ಪ್ರತಿಜ್ಞೆಯು ನಿನ್ನ ಮನಸ್ಸಿಗೆ ಬಂದಿತಷ್ಟೆ? ಇದರಿಂದ ನಿನ್ನ ಪರೀಕ್ಷೆಯಾಗುವದು. ನನ್ನದೂ ಪರೀಕ್ಷೆಯಾಗುವದು. ಋಷಿಯೆ, ಇನ್ನು ನೀನು ಹೊರಡಬಹುದು.....

ದಧೀಚಿ:—ನಾನು ಬಹುಕಾಲ ನೀರಲ್ಲಿ ಮುಳುಗಿರ ಬಲ್ಲೆನು. ಈ ಅವಧಿಯಲ್ಲಿ ಎಲ್ಲ ದೇವತೆಗಳೂ ಪಾರಾಗಿ ಹೋದರೆ?

ವೃತ್ರಾಸುರ:—ಹೋಗಲಿ, ನಾನು ಬೇಡೆನ್ನುವದಿಲ್ಲ. ದಾಟಿ ಹೋದವರೆಲ್ಲ ಮುಕ್ತರು. ಇಲ್ಲಿ ಉಳಿದವರಷ್ಟೆ ದಾನವರ ಅಸಿಗೆ ಆಹುತಿಯಾಗುವರು. ಮುಖ್ಯವಾಗಿ ನಾನು ನನ್ನೀ ಪ್ರತಿಜ್ಞೆಯ ಮುಖಾಂತರ ಇಂದ್ರಾಣಿಯು ಮೊದಲು ಯಾರನ್ನು ಪಾರುಮಾಡುವಳೆಂಬದನ್ನು ಪರೀಕ್ಷಿಸಬೇಕಾಗಿದೆ

ದಧೀಚಿ:—ನಿನ್ನ ಉದ್ದೇಶವು ಏನೆ ಇರಲಿ, ಇಚ್ಛೆಯು ಹೇಗೆ ಇರಲಿ, ಪ್ರತಿಜ್ಞೆಯು ಮಾತ್ರ ಅಚಲವಾಗಲಿ! ಪ್ರತಿಜ್ಞಾವಾಣಿಯು ಅನ್ಯಥಾ ಆಗಕೂಡದು.

ವೃತ್ರಾಸುರ:—ನಾನು ಪ್ರತಿಜ್ಞೆಯೆಂದು ಮಾತಾಡಿರಲಿ, ಇಲ್ಲವೆ ಸಹಜವಾಗಿಯೆ ಮಾತಾಡಿರಲಿ ಅದು ಅನ್ಯಥಾ ಆಗದು. ಈ ದಾನವ ರಾಜನು ಅಸತ್ಯವನ್ನೆಂದೂ ಆಡಿದವನಲ್ಲ!

ದಧೀಚಿ:— ನೀನು ಹೀಗೆ ಸತ್ಯಮಾರ್ಗವನ್ನೆಮ್ಮಿರುವುದು ಸಂತೋಷದ ಸಂಗತಿಯೆ ಸರಿ! ನಾನು ಹೋಗುವೆನು. (ನದಿಗೆ ಹೋಗಿ ನೀರಲ್ಲಿಳಿಯುವನು) ಶಚಿ, ಇನ್ನು ನಾನು ನೀರಲ್ಲಿ ಮುಳುಗುವೆನು. ನೀನು ಹೆಸ

ರನ್ನುಚ್ಚರಿಸು. ಒಬ್ಬ ದೇವನನ್ನಾದರೂ ಪಾರುಮಾಡು. ಇಂದಿಲ್ಲ ದಿದ್ದರಿಲ್ಲ, ಭವಿಷ್ಯತ್ಕಾಲದ ಒಂದು ದಿನದಲ್ಲಾದರೂ-ಯುಗಾನು ಯುಗ ಗಳ ತರುವಾಯದ ಆ ಸುಸಮಯದಲ್ಲಾದರೂ ಇಂದು ಪಾರಾದ ದೇವನ ವಂಶಧರರು ಪರಾಧೀನತೆಯ ಬೇಡಿಗಳನ್ನು ಹರಿದೊಗೆದು, ಈ ದೇವ ಭೂಮಿಯನ್ನು ದಾನವರ ಅತ್ಯಾಚಾರದಿಂದ ಮುಕ್ತವಾಡಲಿ! ನಾನು ಈ ಸದುದ್ದೇಶವನ್ನಿಟ್ಟುಕೊಂಡೇ ನೀರಲ್ಲಿ ಮುಳುಗುತ್ತಿರುವೆನು. ಶಕ್ಯವಿ ದ್ದಷ್ಟು ದೀರ್ಘಕಾಲ ಮುಳುಗಿರುವೆನು. ನನ್ನ ಜನಾಂಗವು ಅಕ್ಷಯ ವಾಗಲಿ! ಅಮರವಾಗಲಿ! ಜಯಶೀಲವಾಗಲಿ! ಮಾತೃ ಭೂಮಿಯು ಸ್ವ-ತಂತ್ರವಾಗಲಿ! ಜಯ ಸರಸ್ವತೀ ಜಯ!(ಮುಳುಗುವನು.)

ವೃತ್ರಾಸುರ:—ಇಂದ್ರಾಣಿ, ಇನ್ನು ನೀನು ಯಾವನೊಬ್ಬ ದೇವನ ಹೆಸರನ್ನುಚ್ಚರಿಸಬಹುದು ............

ಶಚಿ:—(ಎಲ್ಲರಿಗಿಂತ ಕಡಿಮೆ ವಯಸ್ಸಿನವನಾದ ದೇವನ ಹತ್ತಿರ ಹೋಗಿ ನಿಂತು) ನೀನು ತರುಣನು. ಅತ್ಯಾಚಾರಗಳ ನಾಶಕ್ಕಾಗಿ ನೀನು ಅಮರ ನಾಗು. ಮಾತೃಭೂಮಿಯ ಮಂಗಲಕ್ಕಾಗಿ ಪ್ರತಿಕ್ಷಣವನ್ನು ವೆಚ್ಚ ಮಾಡುವೆನೆಂದು ಪ್ರತಿಜ್ಞೆ ಮಾಡುತ್ತ ಸೇತುವೆಯನ್ನು ದಾಟಿ ಹೋಗು. ಅಸುರನ ಕಚಾಟಿಯಿಂದ ಪಾರಾಗು (ದೇವನು ಹೋಗುವನು. ಸೇತುವೆ ಯನ್ನು ದಾಟಿ ನಡೆಯುವನು.)

ಉಳಿದ ದೇವತೆಗಳು:—ಋಷಿವರ್ಯರಿನ್ನೂ ನೀರಿನಿಂದೆದ್ದಿಲ್ಲ!

ಶಚಿ:—(ಸರತಿಯಂತೆ ಒಬ್ಬೊಬ್ಬನನ್ನು ಕಳುಹಿಕೊಡುವಳು. ಅವನು ಪಾರಾಗಿ ಹೋಗುವನು ಹೀಗೆ ಇಂದ್ರನೊಬ್ಬನ ಹೊರತು ಎಲ್ಲ ದೇವತೆಗಳೂ ಸೇತುವೆ ಯನ್ನು ದಾಟಿ ಹೋಗುವರು.) ಇನ್ನೂ ಋಷಿಗಳು ನೀರ ಮೇಲೆ ಕಾಣಿಸಿ ಕೊಂಡಿಲ್ಲ! ಪ್ರಿಯತಮರೆ, ಇನ್ನು ನಿಮ್ಮ ಪಾರಿಯು........ಹೊರಡಿರಿ....
(ಇಂದ್ರನು ಸೇತುವೆಯ ಮಾರ್ಗವಾಗಿ ಹೊರಡುವನು )

ವೃತ್ರಾಸುರ:—ಇದೇನು ಮಾಯೆಯೊ? ಇಂದ್ರಜಾಲವೊ?

ಶಚಿ:—ಅಹುದು. ಇಂದ್ರಜಾಲವು. ಇಂದ್ರದೇವರ ಈ ಇಂದ್ರಾಣಿಯು ಹೀಗೆಯೆ ತನ್ನ ಪತಿದೇವರನ್ನು ಪಾರುಮಾಡಿಕೊಳ್ಳುವಳು! ಮೊದಲು ಜನಾಂಗವು! ಬಳಿಕ ಪತಿದೇವರು!

ವೃತ್ರಾಸುರ:—ದಧೀಚಿಋಷಿಯ ಅವಸ್ಥೆ ಏನಾಗಿರಬಹುದು? ಜೀವಿಸಿರಬಹುದೆ? ಜಲಸಮಾಧಿಯನ್ನು ಹೊಂದಿರಬಹುದೆ? (ನದಿಯ ಕಡೆಗೆ ಹೋಗುವನು)

ಇಂದ್ರ:—(ವೃತ್ರಾಸುರನ ಮಾತುಕೇಳಿ ಚಮಕಿತನಾಗಿ ನಿಲ್ಲುವನು.) ಋಷಿರಾಜರೆ, ಋಷಿವರ್ಯರೆ.

ಶಚಿ:—ಅಪ್ಪಾ, ಅಪ್ಪಾ. (ನದಿಯ ಕಡೆಗೆ ಭರದಿಂದ ಹೋಗುವಳು. ಇಂದ್ರನು ನದಿಯಲ್ಲಿ ಹಾರಿಕೊಳ್ಳುವನು.)

ಇಂದ್ರ:—(ಮುಳುಗಿ ಎದ್ದು) ಋಷಿಗಳು ಇರುವರು. ಆದರೆ....

ಶಚಿ:—ಬದುಕಿಲ್ಲವೇನು?

ಇಂದ್ರ:—ದಂಡೆಯಲ್ಲಿರುವ ಗಿಡವನ್ನು ಗಟ್ಟಿಯಾಗಿ ಹಿಡಿದುಕೊಂಡು ಕುಳಿತಿದ್ದಾರೆ! ಜೀವಿಸಿರುವ ಲಕ್ಷಣವಿಲ್ಲ! ನಿಶ್ಚೇತನರಾಗಿ ಹೋಗಿದ್ದಾರೆ!

ಶಚಿ:—ಅಯ್ಯೊ, ಘಾತವಾಯಿತು! ಋಷಿವರ್ಯರೆ, ನಮಗಾಗಿ ನೀವು ಪ್ರಾಣವನ್ನಿತ್ತಿರಾ?

ಇಂದ್ರ:—(ನೋಡಿ ಪರೀಕ್ಷಿಸಿ) ಎಲ್ಲವೂ ಮುಗಿದು ಹೋಗಿದೆ! ಹೃತ್ಕ್ರಿಯೆಯು ನಿಂತು ಹೋಗಿದೆ! ದೇಹವು ಆಣೆಯಕಲ್ಲಿನಂತೆ ಶೀತಳವಾಗಿ ಹೋಗಿದೆ! ಋಷಿವರ್ಯರು ದೇವತೆಗಳ ಜೀವವನ್ನುಳಿಸಲಿಕ್ಕೆ ಸ್ವೇಚ್ಛೆಯಿಂದ ಆತ್ಮಾಹುತಿಯನ್ನು ಕೊಟ್ಟಿದ್ದಾರೆ!

ವೃತ್ರಾಸುರ:—ಋಷಿಯು ಸತ್ತುಹೋಗಿರುವನೆ?

ಶಚಿ:—ಅಪ್ಪಾ. (ಮೂರ್ಛಿತಳಾಗಿ ಬೀಳುವಳು)

ಇಂದ್ರ:—ದೇವತೆಗಳ ಆಶ್ರಯಸ್ಥಳವಿಲ್ಲದಾಯಿತು! ಮಾರ್ಗದರ್ಶ

ಕನು ಮಾಯವಾದನು! ಋಷಿವರ್ಯರ ಸಹವಾಸಕ್ಕೂ ಉಪದೇಶಕ್ಕೂ ಎರವಾದ ದೇವತೆಗಳಿಗೆ ಇನ್ನು ಉನ್ನತಿಯ ಆಶೆಯಿಲ್ಲದಾಯಿತು! ದೇವತೆಗಳು ತಮ್ಮ ಸರ್ವಸ್ವವನ್ನು ಕಳೆದುಕೊಂಡು ಬರಿಗೈಯವರಾದರು! ಇನ್ನು ಅವರು ಮಾತೃಭೂಮಿಯ ಉದ್ಧಾರ ಮಾಡಿಕೊಳ್ಳುವದೆಂತು?

ವೃತ್ರಾಸುರ:—ದೇವರಾಜನೆ, ತಪ್ಪುತ್ತಿರುವೆ! ಇನ್ನು ಉಚ್ಚಾಶ್ರಯನ್ನು ತ್ಯಜಿಸತಕ್ಕವರು ದೇವತೆಗಳಲ್ಲ-ದಾನವರು! ಯಾಕೆಂದರೆ, ದೇವತೆಗಳ ಪಕ್ಷವನ್ನು ವಹಿಸಿದ್ದ ಈ ಋಷಿಯ ಆತ್ಮತ್ಯಾಗದಿಂದ ಹೊತ್ತಿಸಿದ ಬೆಂಕಿಯು ದೇವತೆಗಳಿಗೆ ಮಾರ್ಗದರ್ಶಕವಾಗುವದು. ದಾನವರನ್ನು ಹುರಪಳಿಸಿ ಬಿಡುವದು! (ಮೂರ್ಛಿತನಾಗುವನು.)

---



# ತೃತೀಯಾಂಕ.

(ಬೆಳಗಿನ ಜಾವ. ಆಶ್ರಮದ ಒಂದೆಡೆಯಲ್ಲಿ ಸೂರ್ಯೆಯು ಮಲಗಿದ್ದಾಳೆ. ಬೇರೊಂದು ಸ್ಥಳದಲ್ಲಿ ಅಶ್ವಿನೀಕುಮಾರರು ಪವಡಿಸಿದ್ದಾರೆ. ದೀನವೇಷದಲ್ಲಿದ್ದ ಉಷೆಯು ಪ್ರವೇಶಿಸುವಳು.)

ಉಷೆ:—ಇವರಿನ್ನೂ ಮಲಗಿರುವರಲ್ಲ! ಇವರನ್ನು ಎಚ್ಚರಿಸುವದು ಹೇಗೆ? (ಅಶ್ವಿನೀಕುಮಾರರು ಎಚ್ಚತ್ತು ಸುತ್ತಲೂ ನೋಡುವರು.)

ದಸ್ರ:—ಯಾರವರು? ಉಷೆಯೇನು? ಈ ಸಮಯದಲ್ಲಿ ಇಲ್ಲಿಗೇಕೆ ಬಂದಿರುವೆ?

ನಾಸತ್ಯ:—ನಿನಗೀ ದೀನವೇಷವೇಕೆ? ಮುಖವು ಬಹಳವಾಗಿ ಬಾಡಿದೆ! ಕಾರಣವೇನು?

ಉಷೆ:—ಅಣ್ಣಾಗಳಿರಾ, ನಾವೆಲ್ಲರೂ ಸಂಕಟದಲ್ಲಿ ಸಿಕ್ಕಿದ್ದೇವೆ! ನನ್ನ ಮಾತೆಯನ್ನುದ್ಧರಿಸಿರಿ! ನನ್ನನ್ನು ವಿಪನ್ಮುಕ್ತಳನ್ನಾಗಿ ಮಾಡಿರಿ!

ದಸ್ರ:—ನಿನ್ನ ಮಾತೆ ಯಾರು? ಆದದ್ದಾದರೂ ಏನು? ಚೆನ್ನಾಗಿ ತಿಳಿಯುವಂತೆ ಹೇಳು!

ಉಷೆ:—ದಾನವರು ನಮ್ಮ ಸರ್ವಸ್ವವನ್ನೂ ಸೂರೆಗೊಂಡಿದ್ದಾರೆ! ನಮ್ಮ ಬೆಳೆಗಳನ್ನು ಹಾಳು ಮಾಡಿದ್ದಾರೆ! ದನಕರುಗಳನ್ನು ಅಪಹರಿಸಿದ್ದಾರೆ! ಹಣ್ಣು-ಹಂಪಲುಗಳನ್ನು ಎತ್ತಿ ಒಯ್ದಿದ್ದಾರೆ! ನದಿಯ ಜಲದಲ್ಲಿ ವಿಷವನ್ನು ಹಾಕಿದ್ದಾರೆ! ನಾವು ಜೀವಿಸಿರುವದು ಹೇಗೆ? ಇಂತಹ ಸಮಯದಲ್ಲಿ ನೀವು ಮಲಗಿರುವಿರಲ್ಲವೆ? ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿರುವಿರಲ್ಲವೆ?

ದಸ್ರ:—ಯುದ್ಧವು ನಡೆದೇ ಇದೆ. ವಿಶ್ರಾಂತಿಯೆಂಬದು ಎಳ್ಳಷ್ಟು ಸಹ ದೊರೆಯದಾಗಿದೆ. ನಿನ್ನೆ ಸಾಯಂಕಾಲದ ವರೆಗೆ ಹೋರಾಡಿ ದಣಿದ ನಾವು ಅವಶರಾಗಿ ಬಂದು ಮಲಗಿದ್ದೆವು.

ನಾಸತ್ಯ:—ನಿಶ್ಚಿಂತೆಯೆಲ್ಲಿಯದು? ದೇವರಾಜನಾದ ಇಂದ್ರನು ದಾನವರ ಬಂದಿಯಾಗಿದ್ದಾನೆ. ಇಂದ್ರಾಣಿಯ ರಕ್ಷಣೆಯ ಭಾರವು ನಮ್ಮ ಮೇಲಿದೆ. ನಾವು ಅವಳನ್ನು ಇಲ್ಲಿ ಇರಿಸಿ ಕಾಯುತ್ತಿರುವೆವು.

ದಸ್ರ:—ತಂಗಿ, ದಿನದಂತೆ ನಿನ್ನ ಮುಖವಿಲ್ಲ! ನೀನು ಬಹಳವಾಗಿ ಕಳವಳಗೊಂಡಿರುವೆ! ದೈತ್ಯರ ಉಪಟಳದಲ್ಲಿ ಸಿಕ್ಕಿದ್ದೆಯಾ? ಏನಾಯಿತೆಂಬುದನ್ನು ಹೇಳು ನೋಡೋಣ!

ನಾಸತ್ಯ:—ನಿನ್ನ ತಾಯಿಯಾರು? ನಾನವಳನ್ನು ಎಂದೂ ನೋಡಿದವನಲ್ಲ!

ಉಷೆ:-ಅಣ್ಣಗಳಿರಾ, ಏನು ಹೇಳಲಿ? ನಿಮ್ಮಂತಹ ನಿದ್ದೆಬಡಕರಿಂದ ನನ್ನ ಸಂಕಟವು ಹೇಗೆ ಪರಿಹಾರವಾಗಬೇಕು? ಇದು ಮಲಗುವ ಸಮಯವೆ? ಹೊರಗೆ ಎಲ್ಲೆಲ್ಲಿಯೂ ದಾವಾನಲವು ಹೊತ್ತಿಕೊಂಡು ಧ್ವಂಸ ಲೀಲೆಯನ್ನು ನಡಿಸಿರುವಾಗ ನಿಮಗೆ ಹೇಗೆ ನಿದ್ದೆ ಬರುವದೊ ನಾನರಿಯೆನು!

ದಸ್ರ:—ತಂಗಿ, ನೀನು ಹೀಗೆ ನಮ್ಮನ್ನು ಹೀಯಾಳಿಸದಿರು. ದೈತ್ಯರ ಉಪಟಳದಲ್ಲಿ ಸಿಕ್ಕ ನಮಗೆ ಎಷ್ಟೋ ದಿವಸಗಳಿಂದ ನಿದ್ದೆಯಿರಲಿಲ್ಲ. ಇಂದ್ರಾಣಿಯ ರಕ್ಷಣೆಯ ಚಿಂತೆಯಿಂದ ರಾತ್ರಿಯಲ್ಲಿ ಸರಿಯಾಗಿ ನಿದ್ದೆಮಾಡಲಾರದಾಗಿ ಎಚ್ಚತ್ತು ಕುಳಿತಿದ್ದೆವು. ಕೊನೆಯಲ್ಲಿ ತೀರ ಮೈ ಮರೆದು ಕಣ್ಣಿಗೆ ಕಣ್ಣು ಹಚ್ಚಿದ್ದೆವು. ಅಷ್ಟರಲ್ಲಿ ನೀನು ಬಂದೆ! ಈಗಲೂ ನಮ್ಮ ಕಣ್ಣು ಉರಿಯುತ್ತಿವೆ!

ನಾಸತ್ಯ:—ತಂಗಿ, ಎಲ್ಲವೂ ಹಸಗೆಟ್ಟು ಹೋಗಿದೆ! ಹೊತ್ತಿಗೆ ಸರಿಯಾಗಿ ಆಹಾರವಿಲ್ಲ! ನಿದ್ದೆಯಿಲ್ಲ! ದೇಹವು ನಿರ್ಜೀರ್ಣವಾಗಿ ಹೋಗಿದೆ! ಮುಂದೇನು ಮಾಡಬೇಕೆಂಬುದು ತೋಚದಾಗಿದೆ!

ಉಷೆ:—ಅಣ್ಣಗಳಿರಾ, ಹೀಗೆ ಕಾಲ್ಗೆಡುವುದು ತುಂಬ ಘಾತುಕವು! ಆಹಾರ-ವಿಹಾರಗಳನ್ನು ಬಯಿಸುತ್ತ ಕುಳ್ಳಿರುವ ಸಮಯವಿದಲ್ಲ! ಶತ್ರುಗಳು ಎದೆಯಮೇಲೇರಿ ಕುಳಿತಿದ್ದಾರೆ! ಯಾವಾಗ್ಗೆ ಕುತ್ತಿಗೆ ಹಿಚುಕುವ

ರೆಂಬದರ ನಿಯಮವಿಲ್ಲ! ಇಂತಹ ವೇಳೆಯಲ್ಲಿ ಆಹಾರವನ್ನು ಬಯಿಸಲಾದೀತೆ? ನಿದ್ದೆ ಮಾಡಬೇಕೆಂದು ಆಶೆಮಾಡುವದು ಹಿತಕರವಾದೀತೆ? ಈ ವೇಳೆಯಲ್ಲಿ ಆಹಾರ-ವಿಹಾರಗಳನ್ನು ಸಂಪೂರ್ಣವಮರೆದು ಕ್ಷುದ್ರವಾದ ಹೃದಯದೌರ್ಬಲ್ಯವನ್ನು ತ್ಯಜಿಸಿ ಆತ್ಮರಕ್ಷಣೆಗೆ ಪ್ರಯತ್ನಿಸಬೇಕು! ಆತ್ಮರಕ್ಷಣೆಮಾಡಿಕೊಂಡು ಮತ್ತೆ ಶತ್ರುವಿನೊಡನೆ ಹೋರಾಡಿ ಜಯಶಾಲಿಯಾಗಬೇಕು! ವೈರಿಗಳನ್ನು ಗೊತ್ತಿಗೆ ಹಚ್ಚಿ ನಿಶ್ಚಿಂತರಾದ ಬಳಿಕ, ಆಹಾರ-ವಿಹಾರಗಳನ್ನು ಅನುಭವಿಸಲಿಕ್ಕೆ ಸಾಕಷ್ಟು ಸಮಯವು ದೊರೆಯುವದು.

ದಸ್ರು:—ತಂಗಿ, ನೀನೆನ್ನುವುದು ನಿಜ; ಆದರೆ ನಮ್ಮಲ್ಲಿ ಉತ್ಸಾಹವಿಲ್ಲದಾಗಿದೆ. ಶಕ್ತಿಹೀನರಾದ ನಾವು ಬಲಶಾಲಿಗಳಾಗಿದ್ದ ಅಸುರರನ್ನು ಸದೆಬಡೆಯುವದು ಹೇಗೆ? ನಾವಂತೂ ತೀರ ನಿರಾಶರಾಗಿ ಹೋಗಿದ್ದೇವೆ.

ಉಷೆ:—ನೀವು ಶಕ್ತಿಹೀನರು ಏಕೆ? ಅವರು ಬಲಶಾಲಿಗಳು ಹೇಗೆ? ನೀವೂ ಅವರಂತೆಯೇ ಬಲಶಾಲಿಗಳಾಗಿರುವಿರಿ; ಆದರೆ ಕ್ಷುದ್ರವಿಚಾರಕ್ಕೊಳಗಾಗಿ ನಾವು ಬಲಹೀನರೆಂಬ ಘಾತುಕ ಭಾವನೆ ಮಾಡಿಕೊಂಡು ದೆಸೆಗೆಟ್ಟಿರುವಿರಿ! ಮೊದಲು ಆ ಭಾವನೆಯನ್ನು ಹೊಡೆದೋಡಿಸಿರಿ! ಜಾಗೃತರಾಗಿರಿ!! ಏಳಿರಿ. ಸ್ವದೇಶದ ಉದ್ಧಾರಕ್ಕಾಗಿ-ಸ್ವಜನರ ಸಂಕಟ ಪರಿಹಾರಕ್ಕಾಗಿ-ಆತ್ಮಸಂರಕ್ಷಣೆಗಾಗಿ ಜೀವ ದಾನ ಮಾಡಲಿಕ್ಕೆ ಸಿದ್ಧರಾಗಿ ಮುಂದುವರಿಯಿರಿ!! ನಿಶ್ಚಿತವಾಗಿಯೂ ಕೀರ್ತಿಮಂಡಿತರಾಗುವಿರಿ!

ದಸ್ರು:—ತಂಗಿ, ನೀನು ಸಾಮಾನ್ಯಳಲ್ಲ. ನಿನ್ನ ಹೇಳಿಕೆಯ ಆಶಯವು ನಮಗೆ ಹೊಳೆಯಿತು. ನಾವಿನ್ನು ಜೀವದ ಹಂಗುದೊರೆದು ದಾನವರನ್ನು ಪ್ರತಿಭಟಿಸುವೆವು. ದೇವತೆಗಳಲ್ಲಿ ಈಗಲೂ ಮಲಗಿರುವವರನ್ನು ಹೊಡೆದೆಬ್ಬಿಸು. ಕಾಲ್ಗೆಟ್ಟು ಅಚೇತನರಾಗಿ ಕುಳಿತವರನ್ನು

ಹುರಿದುಂಬಿಸು. ನಿನ್ನ ಪ್ರೇರಣೆಯಿಂದ ಅವರೆಲ್ಲರು ನಮ್ಮನ್ನು ಅನುಸರಿಸಿ ಬರಲಿ. ನಮಗೆ ಸಹಾಯಕರಾಗಲಿ.

ನಾಸತ್ಯ:—ದೇವತೆಗಳ ಆದರದ ಅಣುಗೆಯೆ, ನೀನು ಮಹತ್ತ್ರಾಣಳು. ಮಹಿಮಾವಂದಿತೆಯು. ನೀನು ವಿಶ್ವಸೃಷ್ಟಿಯ ಪ್ರಾರಂಭದ ದಿವಸ ನಿನ್ನ ನೂಪುರದ ಝಂಕಾರದಿಂದ ಅಚೇತನ ವಸ್ತುಗಳನ್ನು ಸಚೇತನಗೊಳಿಸಿದೆ. ಅಂಧಕಾರಮಯವಾದ ದೇವಭೂಮಿಯನ್ನು ಆಲೋಕಮಂಡಿತವಾಗಿ ಮಾಡಿದೆ ವೃಕ್ಷಗಳು ಫಲ-ಪುಷ್ಪಗಳಿಂದ ಭರಿತವಾಗುವಂತೆ ಮಾಡಿ ಪ್ರಾಣಿಗಳಿಗೆ ಅನುಕೂಲತೆಯನ್ನೊದಗಿಸಿ ಕೊಟ್ಟೆ. ಹಾಗೆಯೆ ಈ ಸಮಯದಲ್ಲೂ ನಿನ್ನ ಮಹಿಮೆಯನ್ನು ತೋರಿಸು. ದೇವತೆಗಳ ಹೃದಯದಲ್ಲಿ ಜಯದ ಆಶೆಯು ಅಂಕುರಿಸಲಿ. ಬೆಳೆಯಲಿ. ದೇವತೆಗಳು ಆತ್ಮವಿಶ್ವಾಸವನ್ನು ಹೊಂದಲಿ ಬಾಹುಗಳಲ್ಲಿ ನವಶಕ್ತಿಯನ್ನು ಪಡೆದು ಕೃತಕಾರ್ಯರಾಗಲಿ ಮುನ್ನಿನ ಗೌರವವನ್ನು ಮತ್ತೆ ಪಡೆದು ಚಿರಸುಖಿಗಳಾಗಲಿ.

ಉಷೆ:—ಅಣ್ಣಗಳಿರಾ, ಆ ಶಕ್ತಿಯು ಈಗ ಈ ಉಷೆಯಲ್ಲಿಲ್ಲ.

ಅಶ್ವಿನೀ ಕುಮಾರರು:—ಅದೇಕೆ? ಏನಾಯಿತು?

ಉಷೆ:—ನಾನು ಸಂಕಟಗ್ರಸ್ತೆಯಾಗಿರುವೆನೆಂದು ಮೊದಲೆ ಹೇಳಲಿಲ್ಲವೆ? ಈಗ ನನ್ನ ಸಂರಕ್ಷಣೆ ಮಾಡಿಕೊಳ್ಳುವ ಶಕ್ತಿಯೆ ನನಗಿಲ್ಲದಾಗಿದೆ! ಅಂದ ಬಳಿಕ ದೇವತೆಗಳೆಲ್ಲರಿಗೆ ನಾನು ಶಕ್ತಿಯನ್ನೂ ಸಾಹಸವನ್ನೂ ದಯಪಾಲಿಸುವುದು ಹೇಗೆ? ಇಲ್ಲಿ ನೋಡಿರಿ. (ಉಷೆಯು ಅಶ್ವಿನೀಕುಮಾರರ ಹತ್ತರ ಮೊಳಕಾಲೂರಿ ಕುಳಿತು ಕೈ ಚಾಚುವಳು. ಕೈಗಳು ಬೇಡಿಯಿಂದ ಬಂಧಿಸಲ್ಪಟ್ಟಿದ್ದವು.) ಮಾತೆಯ ಸಂಕೋಲೆಗಳು ಮಗಳನ್ನು ಬಂಧಿಸಿವೆ! ಅಣ್ಣಗಳಿರಾ, ನೀವು ನಿಮ್ಮ ಈ ತಂಗಿಯ ಬಂಧನಗಳನ್ನು ಬಿಡಿಸಲಾರಿರಾ?

ದಸ್ರ:—ನಿನ್ನನ್ನು ಹೀಗೆ ಬಂಧಿಸಿದವರಾರು?

ನಾಸತ್ಯ:—ನಿನ್ನ ಜನನಿಯಾರು? ಈಗ ಅವಳೆಲ್ಲಿ?

ಉಷೆ:—ಜನ್ಮಭೂಮಿಯೆ ನನ್ನ ಜನನಿಯು. ಈ ದೇವಭೂಮಿಯೆ ನನ್ನ ಮಾತೆಯು. ದಾನವರ ಅತ್ಯಾಚಾರದಿಂದ ಮಾತೆಯು ಅಸಹ್ಯವಾದ ಯಾತನೆಗಳನ್ನನುಭವಿಸುತ್ತಿದ್ದಾಳೆ. ಅವಳ ಪುತ್ರರಾಗಿದ್ದ ನೀವು ಸುಮ್ಮನಿದ್ದು ಅವಳ ಕಷ್ಟಗಳನ್ನು ನೋಡುವಿರಾ? ಅವಳ ಉದ್ಧಾರಕ್ಕಾಗಿ ಪ್ರಯತ್ನಿಸುವದು ನಿಮ್ಮ ಕರ್ತವ್ಯವಲ್ಲವೆ? ಮಾತೆಯನ್ನು ಪರರ ದಾಸ್ಯಕ್ಕೊಪ್ಪಿಸಿ, ಆಹಾರ-ವಿಹಾರಗಳಲ್ಲಿ ಕಾಲಕಳೆಯಬೇಕೆಂದಿರುವಿರಾ? ಇದು ಹೇಡಿತನದ ಪರಮಾವಧಿಯಲ್ಲವೆ? ಏತಕ್ಕಾಗಿ ಆ ಮಾತೆಯು ನಿಮಗೆ ಜನ್ಮವಿತ್ತಿರುವುದು? ಏತಕ್ಕಾಗಿ ಆಶ್ರಯಕೊಟ್ಟು ರಕ್ಷಣೆ ಮಾಡಿರುವುದು? ಎಂಬುದನ್ನು ವಿಚಾರಿಸಿ ಋಣ ಪರಿಶೋಧನೆ ಮಾಡುವುದು ನಿಮ್ಮ ಕರ್ತವ್ಯವಲ್ಲವೆ?

ದಸ್ರ:—ಅಹುದು ನಾವು ಮಾತೆಯ ಉದ್ಧಾರ ಮಾಡಲೇಬೇಕು. ನಾವು ಎಲ್ಲವನ್ನೂ ಮರೆದು ಕೇವಲ ಮಾತೆಯ ಮುಕ್ತಿಗಾಗಿ ಮುಂದುವರಿಯುವೆವು.

ನಾಸತ್ಯ:—ಮಾತೆಯ ಬಂಧನಗಳನ್ನು ಪರಿಹರಿಸಲಿಕ್ಕೆ ಈಗಲೆ ಹೊರಡುವೆವು. ನೀನು ನಿಶ್ಚಿಂತಳಾಗಿರು. (ಉಷೆಯ ಬಂಧನಗಳನ್ನು ಬಿಡಿಸುವನು. ಉಷೆಯು ನೃತ್ಯಗೀತ ಮಾಡುತ್ತ ಹೊರಟು ಹೋಗುವಳು.)

ದಸ್ರ:—ತಮ್ಮಾ, ಇನ್ನು ಕಾಲವಿಲಂಬ ಮಾಡಿ ಉಪಯೋಗವಿಲ್ಲ. ಮಾತೃಭೂಮಿಯ ಉದ್ಧಾರಕ್ಕಾಗಿ ನಾವು ಈಗಲೆ ಹೊರಡುವದು ಅತ್ಯವಶ್ಯವು. ಏಳು ಸಿದ್ಧನಾಗು. ಪ್ರಿಯೆ, ಸೂರ್ಯೆ, ಏಳು. (ಸೂರ್ಯೆಯು ಏಳುವಳು) ಪ್ರಿಯೆ, ನಾವು ಈಗ ಮತ್ತೆ ಯುದ್ಧಕ್ಕೆ ಹೊರಡುವೆವು. ಒಳಗೆ ಇಂದ್ರಾಣಿಯು ಮಲಗಿದ್ದಾಳೆ. ನೀನು ಅವಳ ಬಳಿಗೆ ಹೋಗು. ಹೇಗಾದರೂ ಮಾಡಿ ಆತ್ಮರಕ್ಷಣೆ ಮಾಡಿಕೊಳ್ಳಿರಿ.

ಸೂರ್ಯೆ:—ಯುದ್ಧಕ್ಕೆ ಹೊರಡುವಿರಾ?

ದಸ್ರ:—ಅಹುದು. ಜಯಶಾಲಿಗಳಾಗುವವರೆಗೆ ಯುದ್ಧವು ನಮ್ಮ

ಬೆನ್ನ ಬಿಡದು! ದಧೀಚಿ ಋಷಿಗಳ ಆಶೀರ್ವಾದವಾಣಿಯನ್ನು ನೀನು ಕೇಳಿಲ್ಲವೆ? ದೇವದೇವತೆಗಳಿಗೆ ಅತ್ಯಾವಶ್ಯವಾಗಿ ಬೇಕಾದ್ದು ಜಯ!

ನಾಸತ್ಯ:—ಇವರಿಬ್ಬರನ್ನು ಇಲ್ಲಿರಿಸಿ ನಾವು ಯುದ್ಧಕ್ಕೆ ಹೋಗುವದು ಹೇಗೆ? ಇವರು ಆತ್ಮರಕ್ಷಣೆಯನ್ನು ಹೇಗೆ ಮಾಡಿಕೊಂಡಾರು?

ದಸ್ರ:—ತಮ್ಮಾ, ಮಹರ್ಷಿಗಳ ವಚನವನ್ನು ಈಗಾಗಲೆ ಮರೆತು ಬಿಟ್ಟೆಯಾ? 'ಅಬಲೆಯರು ನಿಜವಾಗಿಯೂ ಅಬಲೆಯರಲ್ಲ, ಪುರುಷನು ತನ್ನ ಇಚ್ಛೆ ಹಾಗು ಪ್ರಯೋಜನಗಳಿಗನುಸರಿಸಿ ಅವರನ್ನು ಅಬಲೆಯರೆಂದೂ, ಕಾಮಿನಿಯರೆಂದೂ, ರಮಣಿಯರೆಂದೂ ಕರೆದಿದ್ದಾನೆ ಹೆಂಗಸರು ಆದಿಶಕ್ತಿಯ ಅಂಶಭೂತರು. ಪ್ರಸಂಗವಿಶೇಷದಲ್ಲಿ ಅವರು ತಮ್ಮ ಶಕ್ತಿಯನ್ನು ಪ್ರಕಟಿಸದಿರರು' ಎಂದು ಮಹರ್ಷಿಗಳು ಹೇಳಿಲ್ಲವೆ? ನಾವು ಗುರುಗಳ ಉಕ್ತಿಯಲ್ಲಿ ವಿಶ್ವಾಸವಿರಿಸಿ, ನಿಶ್ಚಿಂತರಾಗಿ ಯುದ್ಧಕ್ಕೆ ಹೊರಡೋಣ.

ಅಶ್ವಿನೀಕುಮಾರರು:-ಪ್ರಿಯತಮೆ, ನಾವಿನ್ನು ಹೋಗಿಬರುವೆವು. (ಬಿಲ್ಲು-ಬಾಣಗಳನ್ನು ತಕ್ಕೊಂಡು ಹೋಗುವರು. ಸೂರ್ಯೆಯು ಒಳಗೆ ಹೋಗಿ ನೋಡುವಳು. ಇಂದ್ರಾಣಿಯು ಇಲ್ಲದಿರುವದನ್ನು ನೋಡಿ ಗಾಬರಿಯಾಗಿ ಹುಡುಕುವಳು. ಹೊರಗೆ ಬಂದು ನೋಡುವಳು. ಅತ್ತಿತ್ತ ಹುಡುಕುವಳು. ಈ ಸಮಯದಲ್ಲಿ ಬಲಾಸುರನು ಬರುವನು.)

ಬಲಾಸುರ:—ಬೆಳಕಿನ ಮಗಳೆ, ಹೊಳಪಿನ ಹೆಂಗಸೆ, ನಿಲ್ಲು. ಕ್ಷಣಕಾಲ ಸುಮ್ಮನೆ ನಿಲ್ಲು. (ಹತ್ತರ ಹೋಗಿ ನಟಜಾನುವಾಗಿ ಕುಳಿತು ವಿನೀತ ಭಾವದಿಂದ) ಇಲ್ಲಿಯೇ ನಿಂತುಕೊಳ್ಳು. ಅತ್ತಿತ್ತ ಚಲಿಸಬೇಡ. ನಾನು ಮನದಣಿಯುವಂತೆ ನಿನ್ನ ಮುಖವನ್ನು ನೋಡುವೆನು. ಸಂತುಷ್ಟನಾಗುವೆನು.

ಸೂರ್ಯೆ:—ಅಸುರನೆ, ಇಲ್ಲಿಗೇಕೆ ಬಂದೆ?

ಬಲಾಸುರ:—ಏಕೆ ಬಂದೆನೆಂಬದನ್ನು ಬಾಯಿಬಿಚ್ಚಿ ಹೇಳಬೇಕೆ? ನೀನೆ ಊಹಿಸಿಕೊಳ್ಳಲಾರೆಯಾ?

ಸೂರ್ಯ:—ನೀನು ಬಲಾಸುರನಲ್ಲವೆ? ವೃತ್ರಾಸುರನ ತಮ್ಮನಲ್ಲವೆ? ನೀನು ಬಹಳ ಒಳ್ಳೆಯವನು. ಅಣ್ಣನಂತೆ ದುಷ್ಟನಲ್ಲ ಅಂದು ನೀನು ನನಗೆ ಹೂಗಳನ್ನು ಕೊಡಬಂದಿದ್ದೆಯಲ್ಲವೆ? ಅವು ಬಹಳ ಸುಂದರವಾಗಿದ್ದವು; ಆದರೆ ಆಗ ನಾನು ಅವುಗಳನ್ನು ತಕೊಳ್ಳಲಿಲ್ಲವೆಂದು ನಿನಗೆ ಸಿಟ್ಟು ಬಂತೇನು? ನನ್ನ ಮೇಲೆ ಸಿಟ್ಟಿಗೇಳುವವನು ನೀನಲ್ಲ! ನಾನು ನಿನ್ನ ಸ್ವಭಾವವನ್ನು ಚನ್ನಾಗಿ ಬಲ್ಲೆನು! ನೀನು ಈಗ ನನಗೋಸುಗ ಹೂಗಳನ್ನು ತಂದಿರಬಹುದಲ್ಲವೆ? ಎಲ್ಲಿವೆ? ತಾ. ನಾನಿಂದು ಒಲ್ಲೆನೆನ್ನುವದಿಲ್ಲ. ಸಂತೋಷದಿಂದ ಸ್ವೀಕರಿಸುವೆನು.

ಬಲಾಸುರ:—(ಆನಂದದಿಂದ) ನಿನಗೆ ಹೂಗಳು ಬೇಕೆ? ಬೇಕಾದಷ್ಟನ್ನು ತಂದು ಕೊಡಬಲ್ಲೆನು!

ಸೂರ್ಯ:—ಈಗ ನಿನ್ನ ಹತ್ತರ ಇಲ್ಲವಷ್ಟೆ?

ಬಲಾಸುರ:—(ಸಣ ಮೋರೆ ಮಾಡಿ) ಒಳಿಯಲ್ಲಿಲ್ಲ. ನಾನು ತರಲಿಲ್ಲ. ಅಂದು ನೀನು ಸ್ವೀಕರಿಸದ್ದರಿಂದ ಇಂದೂ ಸ್ವೀಕರಿಸಲಾರೆಯೆಂದು ಭಾವಿಸಿ ಬಿಟ್ಟು ಬಂದೆನು; ಆದರೆ ನೀನು ಹೂಗಳಿಗಾಗಿ ಚಿಂತಿಸುವ ಕಾರಣವಿಲ್ಲ. ನೀನು ಆಶಿಸಿದಷ್ಟು ಕುಸುಮಗಳನ್ನು ನಾನು ಈಗಿಂದೀಗಳೆ ತಂದು ಕೊಡುವೆನು. ಕೇವಲ ಹೂಗಳೆ ಏಕೆ, ಗಿಡಗಳನ್ನೇ ಕಿತ್ತು ತಂದು ನಿನ್ನ ಮುಂದೆ ಹಿಡಿಯುವೆನು. ನೀನು ನಿನ್ನ ಮನಸ್ಸಿಗೆ ಬಂದ ಹೂಗಳನ್ನು ತೃಪ್ತಿಕರವಾಗುವಂತೆ ಆಯ್ದುಕೊಳ್ಳಬಹುದು. ಹೇಳು, ನಿನಗೆ ನಿಜವಾಗಿಯೂ ಪುಷ್ಪಗಳು ಬೇಕೆ?

ಸೂರ್ಯ:—ಕುಸುಮಗಳು ಯಾರಿಗೆ ಬೇಡ? ಎಲ್ಲರಿಗೂ ಬೇಕು! ಎಲ್ಲರೂ ಸುಂದರ ಹಾಗು ಸುವಾಸನೆಯ ಪುಷ್ಪಗಳನ್ನು ಪ್ರೀತಿಸುತ್ತಿರುವರು. ಆಶಿಸುತ್ತಿರುವರು.

ಬಲಾಸುರ:—ನೀನು ಹೂಗಳನ್ನು ಪ್ರೀತಿಸುತ್ತಿರಬಹುದು; ಆದರೆ ಅವು ನನ್ನ ಕೈಯ ತಗಲುವಿಕೆಯಿಂದ ಅಪವಿತ್ರವಾಗಿ ಹೋಗುವವಲ್ಲ!

ಬೆನ್ನ ಬಿಡದು! ದಧೀಚಿ ಋಷಿಗಳ ಆಶೀರ್ವಾದವಾಣಿಯನ್ನು ನೀನು ಕೇಳಿಲ್ಲವೆ? ದೇವದೇವತೆಗಳಿಗೆ ಅತ್ಯವಶ್ಯವಾಗಿ ಬೇಕಾದ್ದು ಜಯ!

ನಾಸತ್ಯ:—ಇವರಿಬ್ಬರನ್ನು ಇಲ್ಲಿರಿಸಿ ನಾವು ಯುದ್ಧಕ್ಕೆ ಹೋಗುವದು ಹೇಗೆ? ಇವರು ಆತ್ಮರಕ್ಷಣೆಯನ್ನು ಹೇಗೆ ಮಾಡಿಕೊಂಡಾರು?

ದಸ್ರ:—ತಮ್ಮಾ, ಮಹರ್ಷಿಗಳ ವಚನವನ್ನು ಈಗಾಗಲೆ ಮರೆತು ಬಿಟ್ಟೆಯಾ? 'ಅಬಲೆಯರು ನಿಜವಾಗಿಯೂ ಅಬಲೆಯರಲ್ಲ, ಪುರುಷನು ತನ್ನ ಇಚ್ಛೆ ಹಾಗು ಪ್ರಯೋಜನಗಳಿಗನುಸರಿಸಿ ಅವರನ್ನು ಅಬಲೆಯರೆಂದೂ, ಕಾಮಿನಿಯರೆಂದೂ, ರಮಣಿಯರೆಂದೂ ಕರೆದಿದ್ದಾನೆ ಹೆಂಗಸರು ಆದಿಶಕ್ತಿಯ ಅಂಶಭೂತರು. ಪ್ರಸಂಗವಿಶೇಷದಲ್ಲಿ ಅವರು ತಮ್ಮ ಶಕ್ತಿಯನ್ನು ಪ್ರಕಟಿಸದಿರರು' ಎಂದು ಮಹರ್ಷಿಗಳು ಹೇಳಿಲ್ಲವೆ? ನಾವು ಗುರುಗಳ ಉಕ್ತಿಯಲ್ಲಿ ವಿಶ್ವಾಸವಿರಿಸಿ, ನಿಶ್ಚಿಂತರಾಗಿ ಯುದ್ಧಕ್ಕೆ ಹೊರಡೋಣ.

ಅಶ್ವಿನೀಕುಮಾರರು:-ಪ್ರಿಯತಮೆ, ನಾವಿನ್ನು ಹೋಗಿಬರುವೆವು.

(ಬಿಲ್ಲು-ಬಾಣಗಳನ್ನು ತಕ್ಕೊಂಡು ಹೋಗುವರು. ಸೂರ್ಯೆಯು ಒಳಗೆ ಹೋಗಿ ನೋಡುವಳು. ಇಂದ್ರಾಣಿಯು ಇಲ್ಲದಿರುವದನ್ನು ನೋಡಿ ಗಾಬರಿಯಾಗಿ ಹುಡುಕುವಳು. ಹೊರಗೆ ಬಂದು ನೋಡುವಳು. ಅತ್ತಿತ್ತ ಹುಡುಕುವಳು. ಈ ಸಮಯದಲ್ಲಿ ಬಲಾಸುರನು ಬರುವನು.)

ಬಲಾಸುರ:—ಬೆಳಕಿನ ಮಗಳೆ, ಹೊಳಪಿನ ಹೆಂಗಸೆ, ನಿಲ್ಲು. ಕ್ಷಣಕಾಲ ಸುಮ್ಮನೆ ನಿಲ್ಲು. (ಹತ್ತರ ಹೋಗಿ ನಟಜಾನುವಾಗಿ ಕುಳಿತು ವಿನೀತ ಭಾವದಿಂದ) ಇಲ್ಲಿಯೇ ನಿಂತುಕೊಳ್ಳು. ಅತ್ತಿತ್ತ ಚಲಿಸಬೇಡ. ನಾನು ಮನದಣಿಯುವಂತೆ ನಿನ್ನ ಮುಖವನ್ನು ನೋಡುವೆನು. ಸಂತುಷ್ಟನಾಗುವೆನು.

ಸೂರ್ಯೆ:—ಅಸುರನೆ, ಇಲ್ಲಿಗೇಕೆ ಬಂದೆ?

ಬಲಾಸುರ:—ಏಕೆ ಬಂದೆನೆಂಬದನ್ನು ಬಾಯಿಬಿಚ್ಚಿ ಹೇಳಬೇಕೆ? ನೀನೆ ಊಹಿಸಿಕೊಳ್ಳಲಾರೆಯಾ?

ಸೂರ್ಯ:—ನೀನು ಬಲಾಸುರನಲ್ಲವೆ? ವೃತ್ರಾಸುರನ ತಮ್ಮನಲ್ಲವೆ? ನೀನು ಬಹಳ ಒಳ್ಳೆಯವನು. ಅಣ್ಣನಂತೆ ದುಷ್ಟನಲ್ಲ ಅಂದು ನೀನು ನನಗೆ ಹೂಗಳನ್ನು ಕೊಡಬಂದಿದ್ದೆಯಲ್ಲವೆ? ಅವು ಬಹಳ ಸುಂದರವಾಗಿದ್ದವು; ಆದರೆ ಆಗ ನಾನು ಅವುಗಳನ್ನು ತಕೊಳ್ಳಲಿಲ್ಲವೆಂದು ನಿನಗೆ ಸಿಟ್ಟು ಬಂತೇನು? ನನ್ನ ಮೇಲೆ ಸಿಟ್ಟಿಗೇಳುವವನು ನೀನಲ್ಲ! ನಾನು ನಿನ್ನ ಸ್ವಭಾವವನ್ನು ಚನ್ನಾಗಿ ಬಲ್ಲೆನು! ನೀನು ಈಗ ನನಗೋಸುಗ ಹೂಗಳನ್ನು ತಂದಿರಬಹುದಲ್ಲವೆ? ಎಲ್ಲಿವೆ? ತಾ. ನಾನಿಂದು ಒಲ್ಲೆನೆನ್ನುವದಿಲ್ಲ. ಸಂತೋಷದಿಂದ ಸ್ವೀಕರಿಸುವೆನು.

ಬಲಾಸುರ:—(ಆನಂದದಿಂದ) ನಿನಗೆ ಹೂಗಳು ಬೇಕೆ? ಬೇಕಾದಷ್ಟನ್ನು ತಂದು ಕೊಡಬಲ್ಲೆನು!

ಸೂರ್ಯ:—ಈಗ ನಿನ್ನ ಹತ್ತಿರ ಇಲ್ಲವಷ್ಟೆ?

ಬಲಾಸುರ:—(ಸಣ ಮೋರೆ ಮಾಡಿ) ಬಳಿಯಲ್ಲಿಲ್ಲ. ನಾನು ತರಲಿಲ್ಲ. ಅಂದು ನೀನು ಸ್ವೀಕರಿಸದ್ದರಿಂದ ಇಂದೂ ಸ್ವೀಕರಿಸಲಾರೆಯೆಂದು ಭಾವಿಸಿ ಬಿಟ್ಟು ಬಂದೆನು; ಆದರೆ ನೀನು ಹೂಗಳಿಗಾಗಿ ಚಿಂತಿಸುವ ಕಾರಣವಿಲ್ಲ. ನೀನು ಆಶಿಸಿದಷ್ಟು ಕುಸುಮಗಳನ್ನು ನಾನು ಈಗಿಂದೀಗಳೆ ತಂದು ಕೊಡುವೆನು. ಕೇವಲ ಹೂಗಳೆ ಏಕೆ, ಗಿಡಗಳನ್ನೇ ಕಿತ್ತು ತಂದು ನಿನ್ನ ಮುಂದೆ ಹಿಡಿಯುವೆನು. ನೀನು ನಿನ್ನ ಮನಸ್ಸಿಗೆ ಬಂದ ಹೂಗಳನ್ನು ತೃಪ್ತಿಕರವಾಗುವಂತೆ ಆಯ್ದುಕೊಳ್ಳಬಹುದು. ಹೇಳು, ನಿನಗೆ ನಿಜವಾಗಿಯೂ ಪುಷ್ಪಗಳು ಬೇಕೆ?

ಸೂರ್ಯ:—ಕುಸುಮಗಳು ಯಾರಿಗೆ ಬೇಡ? ಎಲ್ಲರಿಗೂ ಬೇಕು! ಎಲ್ಲರೂ ಸುಂದರ ಹಾಗು ಸುವಾಸನೆಯ ಪುಷ್ಪಗಳನ್ನು ಪ್ರೀತಿಸುತ್ತಿರುವರು. ಆಶಿಸುತ್ತಿರುವರು.

ಬಲಾಸುರ:—ನೀನು ಹೂಗಳನ್ನು ಪ್ರೀತಿಸುತ್ತಿರಬಹುದು; ಆದರೆ ಅವು ನನ್ನ ಕೈಯ ತಗಲುವಿಕೆಯಿಂದ ಅಪವಿತ್ರವಾಗಿ ಹೋಗುವವಲ್ಲ!

ಈ ಕರಿಗ್ಗೈಯು ತಾಕಿದ ಳಿಕ ಪುಷ್ಪಗಳಲ್ಲಿ ಆ ಮುನ್ನಿನ ಚಂದ ಉಳಿಯುವದಿಲ್ಲ! ಸೌರಭವು ನಿಲ್ಲುವದಿಲ್ಲ! ಇಂತಹ ಹೂಗಳನ್ನು ನೀನು ತಕ್ಕೊಳ್ಳುವದೆಂತು? ಪ್ರೀತಿಸುವದೆಂತು? ಆಶಿಸುವದೆಂತು?

ಸೂರ್ಯೆ:—ನಾನು ಕರಿಬಣ್ಣವನ್ನು ತಿರಸ್ಕರಿಸುವೆನೆಂದು ನಿನಗೆ ಹೇಳಿದವರಾರು? ನಿನ್ನ ಕರಿಗ್ಗೈಯು ಮುಟ್ಟುತ್ತಲೆ ಹೂಗಳ ವಾಸನೆಯೂ ಆಕಾರವೂ ಕೆಡುವದೆಂದು ಅಂದವರಾರು? ನನ್ನ ಈ ಕೂದಲುಗಳನ್ನು ನೋಡು ಯಾವ ಬಣ್ಣದವಿವೆ? ನನ್ನ ಈ ಕರಿಯಾಲಿಗಳನ್ನು ನೋಡು. ಸುಂದರವಾಗಿಲ್ಲವೆ? ಯಾವ ಬಣ್ಣದವಾಗಿವೆ?

ಬಲಾಸುರ:—ಕಪ್ಪು ಬಣ್ಣದವಿವೆ! ನನ್ನ ಮೈಬಣ್ಣಕ್ಕಿಂತಲೂ ಹೆಚ್ಚು ಕಪ್ಪಾಗಿವೆ ಬಹಳವಾಗಿ ಹೊಳೆಯುತ್ತವೆ! ಒಳ್ಳೆ ಚಂದ ಕಾಣುತ್ತಿವೆ! ಬೆಳಕಿನ ಮಗಳೆ, ನನಗೆ ಅಪ್ಪಣೆಕೊಡು. ನಾನು ಹೋಗಿ ಈಗಿಂದೀಗಲೆ ಹೂಗಳನ್ನೆತ್ತಿಕೊಂಡು ಬರುವೆನು! (ಓಡುತ್ತ ಹೋಗುವನು.)

ಸೂರ್ಯೆ:—ವಿಚಿತ್ರಸ್ವಭಾವದವನಿವನು! ಒದಗಬಹುದಿದ್ದ ಪೀಡೆಯನ್ನು ಯುಕ್ತಿಯಿಂದ ಸಹಜವಾಗಿ ಪರಿಹಸಿಕೊಂಡತಾಯಿತು! (ಬಲಾಸುರನು ಮತ್ತೆ ಬರುವನು. ಕೆಳಗೆ ಮೋರೆಮಾಡಿ ನಿಂತು ಭಯಕಂಪಿತನಾಗಿರುವನು. ಸೂರ್ಯೆಯ ಆನಂದವು ಅಳಿದು ಹೋಯಿತು. ಯಾವ ಯುಕ್ತಿಯನ್ನವಲಂಬಿಸಿ ಹೊಡೆದಟ್ಟಲಿ ಎಂದು ಗೆಣಿಸಹತ್ತಿದಳು) ಮತ್ತೇಕೆ ಬಂದಿ? (ಹತ್ತರ ಹೋಗಿ) ಹೂಗಳನ್ನು ತಂದಂತೆ ಕಾಣುವದಿಲ್ಲ! (ಬಲಾಸುರನು ಸುಮ್ಮನಿರುವನು) ಏಕೆ, ಮಾತಾಡಲೊಲ್ಲೆಯಲ್ಲ! ಹೀಗೇಕೆ ನಡುಗುತ್ತಿರುವೆ? ಏನಾಯಿತು?

ಬಲಾಸುರ:—ಅಣ್ಣನು ಅಪ್ಪಣೆ ಮಾಡಿರುವದೇನಂದರೆ....(ಅಶ್ರುಗಳು ಹೊರಬೀಳುವದರಲ್ಲಿದ್ದವು)

ಸೂರ್ಯೆ:—ಏನೆಂದು ಅಪ್ಪಣೆಮಾಡಿರುವನು?

ಬಲಾಸುರ:—ಅಣ್ಣನಿಗೆ ದಧೀಚಿ ಋಷಿಯ ಶವವು ಬೇಕಾಗಿದೆ. ಬೇಗನೆ ತಕ್ಕೊಂಡು ಬಾ, ಎಂದು ನನಗೆ ಅಪ್ಪಣೆಮಾಡಿದ್ದಾನೆ. ನಾನು ಈ ಕೆಲಸವನ್ನು ಮೊದಲು ಮಾಡಬೇಕಿದೆ. ಅಣ್ಣನ ಅನುಜ್ಞೆಯು

ಮೇರೆಗೆ ಈಗ ಶವವನ್ನು ಹುಡುಕಿಕೊಂಡು ತರೊಕ್ಕೊಂಡು ಹೋಗುವೆನು. ಬಳಿಕ ಮತ್ತೆ ಬರುವೆನು. ಆಗ್ಗೆ ನಾನು ನಿನಗೆ ಹೂಗಳನ್ನು ತಂದು ಕೊಡುವೆನು ಇದರಿಂದ ನಿನಗೇನು ತೊಂದರೆಯಾಗದಷ್ಟೆ? ಉತ್ತಮೋತ್ತಮವಾದ ಹೂಗಳನ್ನು ಬಹಳವಾಗಿ ತಂದುಕೊಡುವೆನು. ನೀನು ಚಿಂತಿಸದಿರು. ತಡಮಾಡುವದಿಲ್ಲ. ಬೇಗನೆ ಬರುವೆನು.

ಸೂರ್ಯೆ:—ಮಹರ್ಷಿಗಳ ಶವಕ್ಕಾಗಿ ನೀನು ದೇವತೆಗಳ ಸಂಗಡ ಯುದ್ಧಮಾಡಬೇಕೆಂದಿರುವೆಯಾ?

ಬಲಾಸುರ:—ಇಲ್ಲ. ಯುದ್ಧ ಮಾಡಲಿಕ್ಕೆ ಬಂದವನು ನಾನಲ್ಲ! ನಾನು ಕಳವಿಗಾಗಿ ಬಂದವನು! ದಧೀಚಿಯ ಹೆಣವನ್ನು ಕದ್ದೊಯ್ಯುವೆನು!

ಸೂರ್ಯೆ:—ವಿಚಿತ್ರ ಕಳ್ಳನು! ಕಳುವಿಗಾಗಿ ಬಂದವನು ತನ್ನ ಕಳುವಿನ ಸಂಗತಿಯನ್ನು ಪರರ ಮುಂದೆ ಹೇಳುವನೆ?

ಬಲಾಸುರ:—ನೀನು ನನಗೆ ಪರಕೀಯಳಲ್ಲ! ನಾನು ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸಿದ್ದೇನೆ! ತೋರಿಕೆಯಲ್ಲಿ ದೇಹಗಳು ಭಿನ್ನವಾಗಿದ್ದರೂ ಅಭಿನ್ನಹೃದಯರೆಂದು ಭಾವಿಸಿದ್ದೇನೆ. ಅಂತೆಯೆ ನಾನು ನನ್ನ ಹೃದ್ಗತವನ್ನು ನಿಸ್ಸಂಕೋಚ ರೀತಿಯಿಂದ ನಿನಗೆ ತಿಳಿಸಿದೆನು.

ಸೂರ್ಯೆ:—ನೀನು ನನ್ನನ್ನು ಮನಃಪೂರ್ವಕವಾಗಿ ಪ್ರೀತಿಸಿರುವೆಯಾ? ಸುಳ್ಳು! ನನಗೀಗ ಹೂಗಳು ಬೇಕಿದ್ದವು. ಬೇಡಿದೆನು. ತಂದುಕೊಡುವೆನೆಂದು ಭಾವಿಸಿ ಹೋದ ನೀನು ನನ್ನನ್ನು ಪ್ರೀತಿಸಿದ್ದೆ ನಿಜವಿದ್ದರೆ, ಹೀಗೆ ಬರಿಗೈಲೆ ಹೊರಳಿ ಬರುತ್ತಿದ್ದೆಯಾ?

ಬಲಾಸುರ:—ಹೊಳಪಿನ ಹೆಂಗುಸೆ, ಬೆಳಕಿನ ಮಗಳೆ, ನಾನು ನಿನ್ನನ್ನು ಪ್ರೀತಿಸಿದ್ದುದರ ನಿಜತ್ವವನ್ನು ನಿನಗೆ ಹೇಗೆ ತೋರಿ ಕೊಡಲಿ? ಯಾವುದೊಂದು ಸಾಧನವಿದ್ದರೆ ಸೂಚಿಸು. ನಾನು ನಿನ್ನ ಮನವರಿಕೆ ಮಾಡಿಕೊಡುವೆನು.

ಸೂರ್ಯೆ:—ಡಂಭಾಚಾರದ ಮಾತಿದು! ನೀನು ನಿಜವಾಗಿಯೂ

ನನ್ನ ಪ್ರಣಯಿಯಾಗಿದ್ದರೆ, ಅಣ್ಣನ ಆಜ್ಞೆಯನ್ನು ಮರೆತು, ಪ್ರೇಯಸಿಯ ಆಜ್ಞಾಪಾಲನೆಗೆ ತತ್ಪರನಾಗು!

ಬಲಾಸುರ:—ಸುಂದರಿ, ಅಣ್ಣನ ಆಜ್ಞೆಯು ಅನುಲ್ಲಂಘನೀಯವಾದ್ದು! ಮೀರುವ ಶಕ್ತಿಯು ನನ್ನಲ್ಲಿಲ್ಲದಾಗಿದೆ!

ಸೂರ್ಯೆ:—ಹೀಗಿದ್ದರೆ, ನೀನು ನನ್ನ ಪ್ರೇಮಪಾತ್ರನಾಗುವದೆಂತು?

ಬಲಾಸುರ:—ಏಕಾಗಬಾರದು? ನಾನೇನು ನಿನ್ನ ಮಾತು ನಡಿಸುವದಿಲ್ಲೆಂದು ಹೇಳಿರುವೆನೆ? ಅಣ್ಣನ ಆಜ್ಞಾಪಾಲನೆಯ ಕೆಲಸವಾಗುತ್ತಲೆ ನಾನು ನಿನ್ನ ಸೇವೆಗೆ ಸಿದ್ಧನಾಗಿ ಬರುವೆನು. ನಿನಗೆ ಈಗಳೆ ಹೂವು ಬೇಕಿದ್ದರೆ, ಅತ್ತಿತ್ತ ಅಲೆದು ಸಂಗ್ರಹಿಸಿಕೊಂಡು ಬಂದು ನಿನ್ನ ಕೆಲಸವನ್ನು ತೀರಿಸಿಕೊಳ್ಳು. ಇದೇನು ಅಂಥ ದೊಡ್ಡ ಕೆಲಸವಲ್ಲ! ಇಷ್ಟಕ್ಕಾಗಿ ಪ್ರಣಯಿಯ ಪ್ರೇಮಪರೀಕ್ಷೆ ತಕ್ಕೊಳ್ಳುವದು ಏಹಿತವಲ್ಲ!

ಸೂರ್ಯೆ:—ಇಲ್ಲಿ ಹೂಗಳಿವೆಯೆ? ಇಲ್ಲ. ಚಿರಸುಂದರವಾಗಿದ್ದ ಈ ದೇವಭೂಮಿಯನ್ನು ನೀವು ಸ್ಮಶಾನವನ್ನಾಗಿ ಮಾಡಿಬಿಟ್ಟಿರುವಿರಿ! ದೇವಭೂಮಿಯು ದಾನವರ ಅತ್ಯಾಚಾರಕ್ಕೆ ಗುರಿಯಾಗಿ ಸ್ಮಶಾನವಾಗಿ ಹೋಗಿದೆ!

ಬಲಾಸುರ:—ಸ್ಮಶಾನವಾಗಿದೆಯೆ? ಆಗಲಿ! (ಗೇನಿಸಿದಂತೆ ಮಾಡಿ) ಓಹೊ! ಅಣ್ಣನ ಅಪ್ಪಣೆಯಂತೆ ನಾನು ಸ್ಮಶಾನಕ್ಕೆ ಹೋಗಬೇಕಲ್ಲವೆ? ಸುಂದರಿ, ಹೇಗಾದರೂ ಮಾಡಿ ಕೊಂಚ ತಡೆ. ಮೊದಲು ಅಣ್ಣನ ಅಪ್ಪಣೆಯನ್ನು ಪಾಲಿಸಿ ಬರುವೆನು. ನಿನ್ನೊಡನೆ ಮಾತಾಡುತ್ತ ನಿಂತದ್ದೆ ಅನುಚಿತವಾಯಿತು! ಅಣ್ಣನು ವಿಲಂಬವನ್ನು ಸಹಿಸುವವನಲ್ಲ! (ಮತ್ತೆ ಭರದಿಂದ ಓಡಿ ಹೋಗುವನು.)

ಸೂರ್ಯೆ:—ದಧೀಚಿಋಷಿಗಳ ಶವದಿಂದ ದಾನವರಿಗೆ ಉಪಯೋಗವೇನು? ವೃತ್ರಾಸುರನು ಶವವನ್ನು ತರುವದಕ್ಕೆ ಬಲಾಸುರನನ್ನು

ಏಕೆ ಕಳುಹಿರಬಹುದು? ಇದರಲ್ಲೇನಾದರೂ ರಹಸ್ಯವಿರಲಿಕ್ಕೆ ಬೇಕು! ವೃತ್ರಾಸುರನು ದೇವತೆಗಳ ಅಹಿತದ ಆಕಾಂಕ್ಷೆಯಿಂದಲೆ ಈ ಕೆಲಸಕ್ಕೆ ಪ್ರವೃತ್ತನಾಗಿರಲಿಕ್ಕೆ ಬೇಕು! ಇದನ್ನು ತಡೆಯುವದು ಹೇಗೆ? ಮಹರ್ಷಿಗಳ ಶವವು ವೃತ್ರಾಸುರನಿಗೆ ದೊರೆಯದಂತೆ ಮಾಡುವದು ಹೇಗೆ? ದೇವತೆಗಳು ಯುದ್ಧದಲ್ಲಿ ತೊಡಗಿದ್ದಾರೆ. ಋಷಿಗಳು ಮಾತ್ರ ಮಹರ್ಷಿಗಳ ಉತ್ತರಕ್ರಿಯೆಯಲ್ಲಿ ತೊಡಗಿರುವರು. ಋಷಿಗಳು ದೈತ್ಯರ ಹಾವಳಿಯಿಂದ ಮಹರ್ಷಿಗಳ ದೇಹವನ್ನು ರಕ್ಷಿಸಿಕೊಳ್ಳುವದು ಹೇಗೆ? ನಾನು ಬಲಾಸುರನನ್ನು ಇಲ್ಲಿಯೆ ತಡೆದು ನಿಲ್ಲಿಸಿದರೆ, ಋಷಿಗಳು ಮಹರ್ಷಿಗಳ ಉತ್ತರಕ್ರಿಯೆಯನ್ನು ನಿರ್ವಿಘ್ನತೆಯಿಂದ ಸಾಗಿಸಬಲ್ಲರು. ನಾನು ಹೀಗೆ ಮಾಡಲೆ ಬೇಕು. (ಕೊಂಚ ಯೋಚಿಸಿ) ಬಲಾಸುರ, ಬಲಾಸುರ.

(ಬಲಾಸುರನು ಮತ್ತೆ ಓಡುತ್ತ ಬರುವನು)

ಬಲಾಸುರ:—ಬೆಳಕಿನ ಮಗಳೆ, ಹೊಳಪಿನ ಹೆಂಗುಸೆ, ನೀನು ನನ್ನನ್ನು ಕರೆದೆಯಲ್ಲವೆ? ನಿನ್ನ ಕೂಗನ್ನು ಕೇಳಿ ನಾನು ಮುಂದ ಹೋ-ಗದಾದೆನು. ದೂರ ಹೋಗಿದ್ದೆನು. ಆದರೂ ನಿನ್ನ ಒದರುವಿಕೆಯನ್ನು ಕೇಳಿ ಹೊರಳಿ ಬಂದೆನು. ನನ್ನನ್ನು ಏಕೆ ಕರೆದೆ?

ಸೂರ್ಯೆ:—ಒಂದು ಮಾತಿನ ಸಲುವಾಗಿ ನಿನ್ನನ್ನು ವಿಚಾರಿಸಬೇಕಾಗಿದೆ ಕೇಳಲಿಯಾ?

ಬಲಾಸುರ:—ಅವಶ್ಯವಾಗಿ ಕೇಳು.

ಸೂರ್ಯೆ:—ನೀನು ನನ್ನನ್ನು ಪ್ರೀತಿಸುತ್ತಿರುವೆಯಷ್ಟೆ? ನಿನ್ನ ಪ್ರಾಣಕ್ಕಿಂತಲೂ ಹೆಚ್ಚೆಂದು ಭಾವಿಸಿ ಪ್ರೀತಿಸುತ್ತಿರುವೆಯಷ್ಟೆ?

ಬಲಾಸುರ:—ನಿಸ್ಸಂದೇಹವಾದ ಮಾತು!

ಸೂರ್ಯೆ:—ಹೀಗಿದ್ದ ಬಳಿಕ ನೀನು ನನ್ನ ಹಿತಾಕಾಂಕ್ಷೆಯಾಗಿರುವದೂ ನಿಸ್ಸಂದೇಹ ಸಂಗತಿ! ಅಲ್ಲವೆ? ನೀನು ಯಾವಾಗಲೂ ನನ್ನ ಒಳಿತನ್ನೇ ಆಶಿಸುತ್ತಿರುವೆಯಷ್ಟೆ? ಇಲ್ಲವೆ ನಿನ್ನ ಈ ಪ್ರೇಮಪಾತ್ರಳು

ಆದಷ್ಟು ಬೇಗ ಹಾಳಾಗಿ ಹೋಗಲಿಯೆಂದು ಇಚ್ಛಿಸುವೆಯಾ?

ಬಲಾಸುರ:—ವಿಪರೀತವಾದ ಮಾತಿದು! ನಿನ್ನ ಅಹಿತವನ್ನು ನಾನೆಂದಾದರೂ ಬಯಸಿದ್ದುಂಟೆ? ನಾನು ಸದಾ ನಿನ್ನ ಮಂಗಲವನ್ನೆ ಕೋರುತ್ತಿರುವೆನು!

ಸೂರ್ಯ:—ನಿಜವೆ?

ಬಲಾಸುರ:—ಸಂಪೂರ್ಣ ಸತ್ಯವಾದ ಮಾತು!

ಸೂರ್ಯ:—(ಬಲಾಸುರನ ಮೇಲೆ ತೀವ್ರ ದೃಷ್ಟಿಯನ್ನಿರಿಸಿ) ಹೀಗಿದ್ದರೆ, ನೀನು ಸ್ಮಶಾನಕ್ಕೆ ಹೋಗಬೇಡ. ಸುಮ್ಮನೆ ಹೊರಳಿ ಹೋಗಿ ಬಿಡು.

ಬಲಾಸುರ:—ದಧೀಚಿಯ ಶವ........

ಸೂರ್ಯ:—ಅದರ ಉಸಾಬರಿಯನ್ನು ನೀನು ಮಾಡಲಾಗದು! ಅಕ್ಷರಶಃ ನನ್ನ ಆಜ್ಞಾನುವರ್ತಿಯಾಗಿ ಬೇರೆ ಮಾತಾಡದೆ ಮನೆಗೆ ಹೊರಟು ಹೋಗು!

ಬಲಾಸುರ:—ಅಣ್ಣನ ಅಪ್ಪಣೆ........

ಸೂರ್ಯ:-ಬೇರೆ ಮಾತಾಡಲಾಗದೆಂದು ಹೇಳಲಿಲ್ಲವೆ? ಹೊರಡು. ಬೇಗನೆ ಹೊರಡು. ಮನೆಯ ಹಾದಿಯ ಹಿಡಿದು ನಡೆ. (ಅಂಗುಲಿ ನಿರ್ದೇಶ ಮಾಡುವಳು.)

ಬಲಾಸುರ:—ಇಗೋ, ಹೊರಟೆನು.........

(ವೃತ್ರಾಸುರನು ಬರುವನು.)

ವೃತ್ರಾಸುರ:—ಹೋಗಬೇಡ, ನಿಲ್ಲು. (ಬಲಾಸುರನು ನಿಲ್ಲುವನು.) ದಧೀಚಿಯ ಮೃತದೇಹವೆಲ್ಲಿ? (ಬಲಾಸುರನು ಸೂರ್ಯೆಯ ಮೋರೆ ನೋಡುತ್ತ ನಿಲ್ಲುವನು.) ಸುಮ್ಮನೆ ನಿಂತೆಯೇಕೆ? ಹೇಳು. ದಧೀಚಿಯ ಹೆಣವೆಲ್ಲಿರುವದು?

ಸೂರ್ಯ:—ಬಲಾಸುರ, ಮಾತಾಡಬೇಡ. ನಾನು ಹೇಳಿದಂತೆ ಸುಮ್ಮನೆ ಹೊರಟು ನಡೆ............

(ಬಲಾಸುರನು ಒಮ್ಮೆ ಸೂರ್ಯನ ಕಡೆಗೆ, ಮತ್ತೊಮ್ಮೆ ವೃತ್ರಾಸುರನ ಕಡೆಗೆ ನೋಡುತ್ತ ಹೋಗಿಬಿಡುವನು.)

ವೃತ್ರಾಸುರ:—ಇದರರ್ಥವೇನು?

ಸೂರ್ಯ:—ನಿನಗೆ ಹೊಳೆಯದೆ? ನಾನು ಅರ್ಥವನ್ನು ತಿಳುಹಿ ಕೊಡುವದು ಅವಶ್ಯವಾಗಿದೆಯೆ? ಇದ್ದರೆ ಹೇಳುವೆನು, ಕೇಳು. ಬಲಾಸುರನು ದಾನವನಾಗಿದ್ದರೂ, ದೇವತೆಗಳನ್ನು ದ್ವೇಷಿಸಿದವನಲ್ಲ. ಇವನು ಸ್ವಜನಾಂಗವಾಗಿದ್ದ ದಾನವರನ್ನು ಹೇಗೆ ಪ್ರೀತಿಸುತ್ತಿರುವನೋ, ಹಾಗೆಯೆ ಪರಜನಾಂಗವಾಗಿದ್ದ ದೇವತೆಗಳನ್ನೂ ಪ್ರೀತಿಸುತ್ತಿರುವನು!

ವೃತ್ರಾಸುರ:—ಹೀಗೋ? ಆಗಲಿ! ನಾನು ಒರೆಗೆ ಹಚ್ಚಿ ಪರೀಕ್ಷಿಸಿ ಬಿಡುವೆನು. ಬಲಾಸುರನಿಂದಲೆ ದಧೀಚಿಯ ಶವವನ್ನು ತರಿಸಿ ಕೊಳ್ಳುವೆನು. ಬಲಾಸುರ, ಬಲಾಸುರ. (ಉತ್ತರವು ದೊರೆಯಲಿಲ್ಲ.)

ಸೂರ್ಯ:—ಅಸುರರಾಜನೆ, ಹೇವಕ್ಕೆ ಬಿದ್ದು ಉಪಯೋಗವಿಲ್ಲ! ಪರಾಜಯವನ್ನೊಪ್ಪಿಕೊಳ್ಳಲೇ ಬೇಕು!

ವೃತ್ರಾಸುರ:—ಈ ಅಸುರ ಸಾಮ್ರಾಟನು ನಿನ್ನ ಬಳಿಯಲ್ಲಿ ಪರಾಜಯವನ್ನೊಪ್ಪಿಕೊಳ್ಳಬೇಕೆ? ಕಾಲತ್ರಯದಲ್ಲೂ ಆಗದ ಮಾತು! ನಾನು ನನ್ನಿಚ್ಛೆಯಂತೆ ಬಲಾಸುರನಿಂದ ಕೆಲಸ ಮಾಡಿಸಿಕೊಳ್ಳುವದು ಅಷ್ಟೊಂದು ಮಹತ್ವದ್ದಲ್ಲ! ಕಾರಣ ನಾನೀಗ ದಧೀಚಿಯ ಶವವನ್ನು ಬಲಾಸುರನಿಂದ ತರಿಸಿಕೊಳ್ಳುವ ನನ್ನ ಮುನ್ನಿನ ಸಂಕಲ್ಪವನ್ನು ತ್ಯಜಿಸುತ್ತೇನೆ; ಹಾಗು ಪೌಲೋಮಿಯಿಂದ-ನಿನ್ನ ಇಂದ್ರಾಣಿಯಿಂದ-ಇಂದ್ರನ ಸಮಕ್ಷಮದಲ್ಲಿ ದಧೀಚಿಯ ಹೆಣವನ್ನು ತರಿಸಿಕೊಳ್ಳುವ ಪ್ರತಿಜ್ಞೆ ಮಾಡುತ್ತೇನೆ. ಪಿಪ್ರು, (ಸೇವಕನು ಬರುತ್ತಾನೆ) ಇಂದ್ರನೆಲ್ಲಿ?

ಪಿಪ್ರು:—ಮಹಾರಾಜರೆ, ಆ ಗಿಡದ ನೆರಳಲ್ಲಿರುವನು.

ವೃತ್ರಾಸುರ:—ಕರೆದುಕೊಂಡು ಬಾ.

ಸೂರ್ಯ:—ಶಚಿ ಎಲ್ಲಿರುವಳು?

ವೃತ್ರಾಸುರ:—ನನ್ನ ಅಪ್ಪಣೆಯ ಮೇರೆಗೆ ದಧೀಚಿಯ ಶವವನ್ನು ತರಲಿಕ್ಕೆ ಸ್ಮಶಾನಕ್ಕೆ ಹೋಗಿದ್ದಾಳೆ ಅಲ್ಪಾವಕಾಶದಲ್ಲಿಯೇ ಇಲ್ಲಿಗೆ ಬರುವಳು. ದಧೀಚಿಯ ದೇಹವನ್ನು ನನಗೆ ತಂದುಕೊಡುವಳು.

ಸೂರ್ಯ:—(ಕೋಪದಿಂದ) ನಾನು ಹೀಗಾಗಗೊಡೆನು. ಶಚಿಯನ್ನು ತಡೆಯುವೆನು. ನಿನಗೆ ಆ ದೇಹವು ದೊರೆಯದಂತೆ ಮಾಡುವೆನು. (ಸ್ಮಶಾನದ ಕಡೆಗೆ ಹೋಗುವಳು.)

ವೃತ್ರಾಸುರ:—(ಗಹಗಹಿಸಿ ನಕ್ಕು) ಆಗಲಿ, ಏನು ಮಾಡುವಿಯೊ ನೋಡುವೆನು!

(ಬಂದಿಯಾಗಿದ್ದ ಇಂದ್ರನು ಸೈನಿಕರಿಂದ ಪರಿವೇಷ್ಟಿತನಾಗಿ ಬರುವನು)

ಇಂದ್ರ:—ಇದು ದಧೀಚಿ ಋಷಿಗಳ ಆಶ್ರಮವು. ಇಂದ್ರಾಣಿಯು ಇಲ್ಲಿಯೆ ಇರುವಳು. ದುಷ್ಟ ದೈತ್ಯನು ಅವಳ ಸಮಕ್ಷಮ ನನ್ನ ಅಪಮಾನ ಮಾಡುವದಕ್ಕಾಗಲಿ, ನನ್ನ ಸಮಕ್ಷಮ ಅವಳ ಅಪಮಾನ ಮಾಡಲಿಕ್ಕಾಗಲಿ ನನ್ನನ್ನು ಇಲ್ಲಿಗೆ ಕರಿಸಿಕೊಂಡಿರಬಹುದು! ಈಗ ನಾನೇನು ಮಾಡಲಿ? ದೈತ್ಯನ ದುರುದ್ದೇಶದ ದುಷ್ಕಾರ್ಯದಿಂದ ಹೇಗೆ ಪಾರಾಗಲಿ? ಈಗ ಈ ಇಂದ್ರನಲ್ಲಿ ಆ ಮೊದಲಿನ ಶಕ್ತಿಯಿಲ್ಲ. ಹತಬಲನಾಗಿ ಹೋಗಿದ್ದಾನೆ! ಯಾವ ಇಂದ್ರನು ತನ್ನ ಅದ್ವಿತೀಯ ಶಕ್ತಿಯಿಂದ ಶಂಬರಾಸುರನ ನೂರಾರು ಕೋಟೆಗಳನ್ನು ಧ್ವಂಸ ಮಾಡಿದನೋ, ಅಸಂಖ್ಯ ದಾನವರನ್ನು ಸಂಹರಿಸಿದನೊ, ಆ ಇಂದ್ರನು ಇಂದು ಆತ್ಮರಕ್ಷಣೆಗೆ ಅಸಮರ್ಥನಾಗಿರುವುದು ದೈವವಿಡಂಬನೆಯ ದ್ಯೋತಕವಲ್ಲದೆ ಮತ್ತೇನು? ಆ ಶಕ್ತಿಯ ಒಂದೇ ಒಂದು ಕಣವು ಈಗ ಅವನಲ್ಲಿ ಉಳಿದಿದ್ದರೆ, ಹೀಗೆ ಅಪಮಾನವನ್ನು ಸಹಿಸುವ ಪ್ರಸಂಗ ಬರುತ್ತಿದ್ದಿಲ್ಲ! ಅದೃಷ್ಟವೆ, ಪ್ರಸನ್ನವಾಗು. ಆ ಮುನ್ನಿನ ಶಕ್ತಿಯ ಒಂದೇ ಒಂದು ಶಕಲವು ಈ ಇಂದ್ರನಲ್ಲಿ ಜಾಗೃತವಾಗುವಂತೆ ಅನುಗ್ರಹಿಸು............

(ಬಂಧನಶೂನ್ಯನಾಗಲಿಕ್ಕೆ ಧಡಪಡಿಸುವನು.)

ವೃತ್ರಾಸುರ:—ದೇವರಾಜನೆ, ಅದೃಷ್ಟದ ಬಳಿಯಲ್ಲಿ ಶಕ್ತಿಯ ಒಂದೇ ಒಂದು ಕಣವನ್ನೇಕೆ ಯಾಚಿಸಿಕೊಳ್ಳುತ್ತಿರುವೆ? ಸಂಪೂರ್ಣ ಶಕ್ತಿಯನ್ನು ಕೇಳಿಕೊಳ್ಳು. ಹಡೆ. ನಾನು ಬೇಡೆನ್ನುವದಿಲ್ಲ. ನೀನು ಶಕ್ತಿವಂತನಾದರೆ, ನನಗೆ ಅಸಮಾಧಾನವಿಲ್ಲವಿಷ್ಟೇ ಅಲ್ಲ; ತುಂಬ ಸಂತೋಷವೆನಿಸುವದು. ಯಾಕೆಂದರೆ, ಹೇಡಿಯೊಡನೆ ಪ್ರತಿಭಟಿಸುವ ಇಚ್ಛೆಯು ನನಗಿಲ್ಲದಾಗಿದೆ. ನನ್ನ ವೈರಿಯು ಪ್ರಬಲನಾಗಿರಬೇಕೆಂದೇ ನಾನು ಆಶಿಸಿದ್ದೇನೆ ಮತ್ತೊಂದು ಮಾತೆಂದರೆ, ನಿನ್ನಂತಹ ಹೇಡಿಯು ದಾನವ ಕುಲತಿಲಕ ಪುಲೋಮನನ ನಂದಿನಿಯೂ, ದಾನವ ಕುಲಾಂಬುಧಿಚಂದ್ರಸ್ವರೂಪಳೂ ಆದ ಪೌಲೋಮಿಯ ಪತಿಯಾಗಿರುವದು ನನಗೆ ಅತ್ಯಂತ ವ್ಯಥೆಯನ್ನುಂಟು ಮಾಡುತ್ತಿದೆ! ಇರಲಿ. ಇಂದು ಈ ಸಮಯದಲ್ಲಿ ನಾನೊಂದು ಉದ್ದೇಶವನ್ನಿಟ್ಟುಕೊಂಡು ಇಲ್ಲಿಗೆ ಬಂದಿದ್ದೇನೆ. ಆ ಉದ್ದೇಶವನ್ನು ಹೇಳುವೆನು, ಕೇಳಿಕೊಳ್ಳು. ದಧೀಚಿಯು ನಿನ್ನಿನ ದಿವಸ ಶೋಚನೀಯ ಮರಣವನ್ನು ಹೊಂದಿರುವನಷ್ಟೆ? ಆ ತ್ಯಾಗಿವರ್ಯನ-ಅಲ್ಲ ದುಸ್ಸಾಹಸಿಕನ-ವಿಷಯದಲ್ಲಿ ಯೋಗ್ಯ ಸನ್ಮಾನವನ್ನು ತೋರುವದು ಅಸುರ ಸಾರ್ವಭೌಮನಾದ ನನ್ನ ಕರ್ತವ್ಯವು; ಆದರೆ ನಿನ್ನಿನ ದಿವಸ ಈ ಕರ್ತವ್ಯವು ನನ್ನ ಲಕ್ಷ್ಯದಲ್ಲಿ ಬರಲಿಲ್ಲ. ಅಂತೆಯೆ ನಾನು ದಧೀಚಿಯ ಶವವನ್ನು ಉಪೇಕ್ಷಿಸಿ ಹೋಗಿ ಬಿಟ್ಟೆನು. ರಾತ್ರಿಯಲ್ಲಿ ಬಹಳವಾಗಿ ಯೋಚಿಸಿದೆನು. ಯೋಚನೆಯು ಫಲವಾಗಿ ಕರ್ತವ್ಯವನ್ನು ನಿರ್ಧರಿಸಿಕೊಂಡೆನು. ದಧೀಚಿಯ ಶವಕ್ಕೆ ತಕ್ಕ ಮನ್ನಣೆ ಮಾಡುವದೇ ನನ್ನ ನಿರ್ಧಾರಣೆಯಾಗಿದೆ ಕಾರಣ ನಾನೀಗ ಆ ಶವವನ್ನು ಒಯ್ಯಬೇಕಾಗಿದೆ. ನೀನು ನನ್ನ ಈ ಕೆಲಸಕ್ಕೆ ಸಹಾಯಕನಾಗಬೇಕು. ನಾನು ದಧೀಚಿಯ ಅಸ್ಥಿಗಳನ್ನಿರಿಸುವದಕ್ಕಾಗಿ ಸುಂದರವಾದೊಂದು ಗೃಹವನ್ನು ನಿರ್ಮಿಸುವೆನು. ಅಲ್ಲಿ ರತ್ನಖಚಿತವಾದ ಸಿಂಹಾಸನವನ್ನು ರಚಿಸುವೆನು. ಸಿಂಹಾಸನದ ಮೇಲೆ ದಧೀಚಿಯ ಅಸ್ಥಿಗಳನ್ನಿರಿಸುವೆನು. ಜನರು ವಿಸ್ಮಯ

ದಿಂದ ನೋಡಿ, ತ್ಯಾಗಿವರ್ಯನ ತ್ಯಾಗವನ್ನು-ಅಲ್ಲ-ದುಸ್ಸಾಹಸವನ್ನು ವರ್ಣಿಸಲಿ. ದಾನವ ಸಾಮ್ರಾಟನಾದ ನನ್ನ ಉದಾರತೆಯನ್ನು ಕೊಂಡಾಡಲಿ. ಹೀಗಾಗುವದು ಒಳಿತಲ್ಲವೆ?

ಇಂದ್ರ:—ಒಳಿತೆ ಸರಿ!

ವೃತ್ರಾಸುರ:—ಹೀಗಿದ್ದರೆ, ನೀನು ಸ್ವೇಚ್ಛೆಯಿಂದ ದಧೀಚಿಯ ಶವವನ್ನು ನನಗೆ ಕೊಡುವೆಯಷ್ಟೆ?

ಇಂದ್ರ:—ಕೊಡಲಾರೆನು!

ವೃತ್ರಾಸುರ:—ಅದೇಕೆ?

ಇಂದ್ರ:—ನೀನು ಕೇವಲ ದಧೀಚಿಋಷಿಗಳ ಸನ್ಮಾನಪ್ರದರ್ಶನಕ್ಕಾಗಿ ಹೀಗೆ ಮಾಡಬಯಸಿದವನಲ್ಲ. ಇದರಲ್ಲಿ ನಿನ್ನ ಇನ್ನೊಂದು ಗುಪ್ತ ಉದ್ದೇಶವಿದೆ. ನಾನದನ್ನು ಅರಿತಿರುವೆನು.

ವೃತ್ರಾಸುರ:—(ಭಯದಿಂದ) ಅದಾವುದು? ಹೇಳು. ನೋಡೋಣ.

ಇಂದ್ರ:—ನೀನು ದಧೀಚಿಋಷಿಗಳ ಮರಣವನ್ನು ನೋಡಿ ಭಯಗ್ರಸ್ತನಾಗಲಿಲ್ಲವೆ? ಬಳಿಕ ಕೆಲಹೊತ್ತಿನ ಮೇಲೆ ಮೂರ್ಛಿತನಾಗಲಿಲ್ಲವೆ?

ವೃತ್ರಾಸುರ:—ಇಲ್ಲ! ಯಾರು ಹೀಗೆ ಹೇಳುವರು?

ಇಂದ್ರ:—ನಾನೇ ಹೇಳುವೆನು, ಕೇಳು. ಪಾಷಾಣ ಹೃದಯನು ನೀನು! ಅತಿಕಠೋರ ಸ್ವಭಾವದವನು ನೀನು! ದಧೀಚಿಋಷಿಗಳು ಜೀವಿಸಿರುವಾಗ ನೀನು ಅವರಿಗೆ ಎಂದೂ ಹೆದರಿದವನಲ್ಲ. ಹೀಗಿದ್ದು ಅವರ ಮರಣವನ್ನು ನೋಡಿ ಬೆದರಬೇಕಾದರೆ, ಇದರಲ್ಲಿ ಯಾವದೊಂದು ಇಂಗಿತವು ಅಡಕವಾಗಿರಲಿಕ್ಕೆ ಬೇಕಷ್ಟೆ?

ವೃತ್ರಾಸುರ:—ಏನಾದರೊಂದನ್ನು ಕಲ್ಪಿಸಿಕೊಂಡಿರುವೆ! ಯಾವ ಇಂಗಿತವೂ ಅಡಕವಾಗಿಲ್ಲ!

ಇಂದ್ರ:—ಆ ಇಂಗಿತವನ್ನು ಸ್ಪಷ್ಟವಾಗಿಯೆ ಹೇಳುವೆನು ಕೇಳು. ದಧೀಚಿಋಷಿಗಳ ಅಸ್ಥಿಯೆ ನಿನ್ನ ಮೃತ್ಯುಬಾಣವು! ನಿನ್ನ ಜೊಳ್ಳು ಮಾತು

ಗಳಿಂದ ಮೋಸಗೊಳ್ಳುವವನು ನಾನಲ್ಲ! ನಿನಗೆ ದಧೀಚಿಋಷಿಗಳ ದೇಹವು ದೊರೆಯದು!

ವೃತ್ರಾಸುರ:—ಈ ಅಸುರ ಸಾಮ್ರಾಟನು ದಧೀಚಿಯ ಅಸ್ಥಿಗೆ ಹೆದರುವನೆ? ಆ ಅಸ್ಥಿಯು ಈ ಪ್ರಬಲ ಪರಾಕ್ರಮಿಯ ಮೃತ್ಯುಬಾಣ ವಾಗುವದೆ? ಅಸಂಬದ್ಧ ಪ್ರಲಾಪವಲ್ಲದೆ ಬೇರಿಲ್ಲ!...........ದೇವರಾಜನೆ, ನಿರರ್ಥಕ ಕಲ್ಪನೆಗೊಳಗಾಗಿ ನನ್ನ ಕರ್ತವ್ಯಕ್ಕೆ ತಡೆಯನ್ನುಂಟು ಮಾಡಬೇಡ! ನಾನು ಆ ಶವವನ್ನು ಒಯ್ಯುವೆನು. ನನ್ನ ಇಚ್ಛೆಯಂತೆ ಸತ್ಕರಿಸುವೆನು. ನೀನಿದಕ್ಕೆ ಅಡ್ಡಬರಬೇಡ! ಇನ್ನೊಂದು ಮಾತೆಂದರೆ, ನಾನು ಅಕೃತಜ್ಞನಲ್ಲ. ಪೌಲೋಮಿಗೆ ನಾನು ಏನೆಂದು ಹೇಳಿರುವೆನೆಂಬದನ್ನು ಬಲ್ಲೆಯಾ?

ಇಂದ್ರ:—ಈಗ ಅವಳೆಲ್ಲಿ?

ವೃತ್ರಾಸುರ:—ಪೌಲೋಮಿಯು ನೆರೆಮನೆಯ ಹೊಸ್ತಿಲಕ್ಕೆ ತಲೆಗಟ್ಟಿಸಿಕೊಂಡು ಆತ್ಮಹತ್ಯೆಮಾಡಿಕೊಳ್ಳುವದರಲ್ಲಿದ್ದಳು. ನಾನು ಅವಳನ್ನು ಆತ್ಮಹತ್ಯೆಯ ಘಾತುಕ ಪ್ರವೃತ್ತಿಯಿಂದ ತಡೆದೆನು ದಧೀಚಿಯ ಮೃತದೇಹವನ್ನು ತಂದುಕೊಟ್ಟರೆ, ಇಂದ್ರನನ್ನು ಬಂಧಮುಕ್ತನನ್ನಾಗಿ ಮಾಡುವೆನೆಂದು ಹೇಳಿದೆನು. ಅವಳು ಪತಿಯ ಬಂಧನ ಮುಕ್ತತೆಯನ್ನು ಬಯಸಿ, ದಧಿಚಿಯ ಹೆಣವನ್ನು ತರಲಿಕ್ಕೆ ಹೋಗಿದ್ದಾಳೆ. ಋಷಿಗಳೂ ನಿನ್ನ ಬಂಧಮುಕ್ತತೆಯನ್ನು ಬಯಸುತ್ತಿದ್ದಾರೆ. ಕಾರಣ ಅವರು ಪೌಲೋಮಿಯ ಬೇಡಿಕೆಯ ಮೇರೆಗೆ ದಧೀಚಿಯ ದೇಹವನ್ನು ನನಗೆ ಒಪ್ಪಿಸಲಿಕ್ಕೆ ಸಿದ್ಧರಾಗದಿರರು.

ಇಂದ್ರ:—ದಾನವಸಾಮ್ರಾಟನೆ, ದಧೀಚಿಋಷಿಗಳ ಮೃತಶರೀರಕ್ಕಾಗಿ ನೀನು ಇಷ್ಟೊಂದು ಹಪಾಪಿಸಿರುವದೇಕೆ? ನಿಜವಾಗಿ ಹೇಳು ದಧೀಚಿಋಷಿಗಳ ಶವದಿಂದ ನಿನಗೆ ಉಪಯೋಗವೇನು?

ವೃತ್ರಾಸುರ:—ನಿನ್ನಿನ ರಾತ್ರಿಯಲ್ಲಿ ಒಂದು ವಿಚಿತ್ರ ಕನಸ

ಕಂಡೆನು. ಎಂತಹ ಭಯಂಕರ ನೋಟವದು! ನಾನದನ್ನು ನೋಡಿ ಭಯಕಂಪಿತನಾಗಿ ಹೋದೆನು!........ದೇವರಾಜನೆ, ಕನಸನ್ನು ನಂಬ ಲಿಕ್ಕಾದೀತೆ? ಕನಸೆಂಬುದು ಮಂಗನಂತಿದ್ದ ಮನಸ್ಸಿನ ವಿಚಿತ್ರಕಲ್ಪನೆಗಳ ಪ್ರತಿಬಿಂಬವು.

ಇಂದ್ರ:—ನೀನು ಕನಸಿನಲ್ಲಿ ಯಾವ ನೋಟವನ್ನು ನೋಡಿದೆ?

ವೃತ್ರಾಸುರ:—ದೇವರಾಜನೆ, ಅದನ್ನು ಕೇಳಿಕೊಂಡು ನೀನು ಮಾಡುವದೇನು? ಕನಸಿಗೂ ದಧೀಚಿಯ ಶವಕ್ಕೂ ಏನೂ ಸಂಬಂಧ ವಿಲ್ಲ. ಸಾಮ್ರಾಟನು ನಾನು. ಕರ್ತವ್ಯವನ್ನು ಕೊನೆಗಾಣಿಸಲೇ ಬೇಕು. ದಧೀಚಿಋಷಿಯು ನನ್ನ ವೈರಿಯಾಗಿದ್ದರೂ, ಅವನ ಸದ್ಗುಣಗಳು ನನಗೆ ಪ್ರಿಯವಾಗಿವೆ. ನಾನು ಆ ಮಹಾತ್ಮನ—ಅಲ್ಲ—ದುಸ್ಸಾಹಸಿಕನ ವಿಷಯ ದಲ್ಲಿ ನನ್ನ ಆದರವನ್ನು ಪ್ರಕಟಿಸಬೇಕಾಗಿದೆ. ಮತ್ತೊಂದು ಮಾತೆಂದರೆ, ಒಂದು ಸಲ ನಾನು ದಧೀಚಿಯ ಕೈಯಲ್ಲಿ ಕಬ್ಬಿಣದ ಮೊಳೆಗಳನ್ನು ಜಡಿಸಿ ದ್ದೆನು. ನಾನು ಈ ಅಪರಾಧದ ಪರಿಮಾರ್ಜನೆಯನ್ನು ದಧೀಚಿಋಷಿಯ ಶವಕ್ಕೆ ಸನ್ಮಾನ ಕೊಡುವದರ ಮುಖಾಂತರ ಮಾಡಿಕೊಳ್ಳಬೇಕೆಂದಿದ್ದೇನೆ.

ಇಂದ್ರ:—ದೈತ್ಯರಾಜನೆ, ನಿನ್ನ ಮಾತುಗಳಿಂದ ನನ್ನ ತರ್ಕವು ನಿಜವಾದದ್ದೆಂಬದರ ಮನವರಿಕೆಯು ನನಗಾಗಹತ್ತಿದೆ! ಏನೇ ಇರಲಿ, ನಾನು ದಧೀಚಿಋಷಿಗಳ ಶವವನ್ನು ನಿನಗೆ ಕೊಡಲಾರೆನು. ಕೊಡಿಸ ಲಾರೆನು. ಋಷಿಗಳು ದಧೀಚಿಮುನಿಗಳ ದೇಹವನ್ನು ಸುಟ್ಟು, ಭಸ್ಮ ವನ್ನು ದೇವತೆಗಳಿಗೆ ಹಂಚಲಿ.

ವೃತ್ರಾಸುರ:—ನೀನು ಕೊಡುವದಿಲ್ಲೆಂದರೆ ನಾನು ಕೇಳತಕ್ಕವ ನಲ್ಲ. ನಾನು ಹೇಗಾದರೂ ಮಾಡಿ ಆ ಶವವನ್ನು ಒಯ್ಯತಕ್ಕವನೆ!

ಇಂದ್ರ:—ಹೇಗೆ ಒಯ್ಯುವೆ?

ವೃತ್ರಾಸುರ:—ಪೌಲೋಮಿಯು ಆ ಶವವನ್ನು ತಂದುಕೊಡು ವೆನೆಂದು ಹೇಳಿ ಹೋಗಿದ್ದಾಳೆ. ನಿಶ್ಚಯವಾಗಿಯೂ ತಂದುಕೊಡುವಳು.

ಇಂದ್ರ:—ಅವಳು ನನ್ನ ಇಚ್ಛೆಯ ವಿರುದ್ಧವಾಗಿ ವರ್ತಿಸಳು! ನಿನಗೆ ಆ ಶವವು ದೊರೆಯದು!

ವೃತ್ರಾಸುರ:—ನಿಶ್ಚಯವಾಗಿಯೂ ದೊರೆಯುವದು! ನವಪರಿಣೀತ ರಮಣಿಯವಳು. ಅವಳಿಗೆ ಪತಿಯ ಬಂಧನಮುಕ್ತಿಯು ಅವಶ್ಯವಾಗಿದೆ. ಅವಳು ಪತಿಯ ಇಚ್ಛೆಯ ವಿರುದ್ಧವಾಗಿಯೂ ಶವವನ್ನು ನನಗೆ ಕೊಡುವಳು. ಪತಿಯನ್ನು ಸೆರೆಯಿಂದ ಪಾರುಮಾಡಿಕೊಂಡು ಕರೆದೊಯ್ಯುವಳು. ಇನ್ನೊಂದು ಮಾತೆಂದರೆ, ಅವಳು ಅಸುರನಂದಿನಿಯು. ಪಿತೃಕುಲದ ನಾಶವನ್ನೆಂದೂ ಇಚ್ಛಿಸಳು.

ಇಂದ್ರ:—ನಾನು ಕೊಡಗೊಡುವದಿಲ್ಲ! ಅವಳು ನನ್ನ ಅಪ್ಪಣೆಯನ್ನು ಹೇಗೆ ಮೀರುವಳೆಂಬುದನ್ನು ನೋಡಿ ಬಿಡುವೆನು!

ವೃತ್ರಾಸುರ:—ಆಗಲಿ! ನೋಡಿಯೆ ಬಿಡು! ಅತ್ತ ನೋಡು. ಶಚಿಯು ಬರುತ್ತಿರುವಳು. ಮೋರೆಯ ಮೇಲೆ ಉಲ್ಲಾಸದ ಕಳೆಯಿದೆ. ನಿಶ್ಚಯವಾಗಿಯೂ ಶವವನ್ನು ತಂದಿರುವಳು. ಹಿಂದೆ ಋಷಿಗಳು ಬರುತ್ತಿರುವರು. ದೇವರಾಜನ ಬಂಧನಮುಕ್ತಿಯ ಇಚ್ಛೆಯಿಂದ ಅವರು ಶವವನ್ನು ಹೊತ್ತುಕೊಂಡು ಬರುತ್ತಿರುವರಾದೀತು!

ಇಂದ್ರ:—ಇಲ್ಲ. ಅವರಿಗೆ ದೇವರಾಜನ ಬಂಧನಮುಕ್ತತೆಯ ಅವಶ್ಯಕತೆಯಿಲ್ಲ. ನಿನ್ನ ಮರಣದ ಅವಶ್ಯಕತೆಯಿದೆ. ಅವರು ದೇವರಾಜನನ್ನು ಬಂಧನದಿಂದ ಬಿಡಿಸಿಕೊಳ್ಳುವ ಕ್ಷುದ್ರಕಾರ್ಯಕ್ಕಾಗಿ, ನಿನ್ನ ಮೃತ್ಯುಬಾಣವನ್ನು ಕಳೆದುಕೊಳ್ಳುವ ಮೂರ್ಖತನಕ್ಕೆ ಗುರಿಯಾಗುವ ಸಂಭವವಿಲ್ಲ!

(ಶಚಿಯು ಬರುವಳು. ವೃತ್ರಾಸುರನ ಹತ್ತರ ಹೋಗಿ ನಿಲ್ಲುವಳು.)

ಶಚಿ:—ದೈತ್ಯರಾಜನೆ, ಇನ್ನು ಇವರನ್ನು ಬಿಟ್ಟು ಕೊಡು.

ವೃತ್ರಾಸುರ:—ನಾನು ನನ್ನ ವಚನದಂತೆ ನಡೆಯಲಿಕ್ಕೆ ಸಿದ್ಧನಿದ್ದೇನೆ. ದಧೀಚಿಯ ಶವವೆಲ್ಲಿ? ಮೊದಲು ನನಗೆ ಆ ಶವವು ಬೇಕು.

ಶಚಿ:—ಋಷಿಗಳು ಶವವನ್ನು ಚಿತೆಯು ಮೇಲಿರಿಸಿದ್ದರು. ಇನ್ನು ಅಗ್ನಿಸಂಸ್ಕಾರ ಮಾಡತಕ್ಕವರಿದ್ದರು. ನಾನು ಧಾವಿಸಿ ಹೋಗಿ ಅವರನ್ನು ಬಹು ಬಗೆಗಳಿಂದ ಬೇಡಿಕೊಂಡೆನು. ಕೊನೆಯಲ್ಲಿ ಅವರು ನನ್ನ ಮಾತಿಗೆ ಸಮ್ಮತಿಸಿದರು. ಚಿತೆಯಿಂದ ಶವವನ್ನು ಹೊರದೆಗೆದರು. ಹೊತ್ತು ತರುತ್ತಿರುವರು.

(ಋಷಿಗಳು ದಧೀಚಿಯ ಶವವನ್ನು ತಕ್ಕೊಂಡು ಬರುವರು.)

ಇಂದ್ರ:—ಪ್ರಿಯತಮೆ, ಋಷಿಗಳೆ, ದಧೀಚಿ ಋಷಿಗಳ ಶವವನ್ನು ಅಸುರರಾಜನಿಗೆ ಕೊಡಬೇಡಿರಿ. ಆ ಶವದಲ್ಲಿ ಅದ್ವಿತೀಯ ಶಕ್ತಿಯಿದೆ. ಅಗೊ, ನೋಡಿರಿ. ಶವದ ದರ್ಶನ ಮಾತ್ರದಿಂದ ದಾನವರಾಜನು ಗದಗದನೆ ನಡುಗುತ್ತಿರುವನು!

ವೃತ್ರಾಸುರ:—ಪೌಲೋಮಿ, ನಿನಗೆ ಪತಿಯ ಬಂಧನಮುಕ್ತತೆಯು ಬೇಡವೆ? ಈ ಶವಕ್ಕಿಂತಲೂ ಪತಿಯ ಜೀವಿತವು ಹೆಚ್ಚಿನದಲ್ಲವೆ? ವಿಚಾರಿಸಿ ನೋಡು!

ಇಂದ್ರ:—ಸಾಧ್ವಿಯೆ, ಪತಿಯ ಆಜ್ಞಾಪಾಲನೆಯು ನಿನ್ನ ಶ್ರೇಷ್ಠತಮ ಕರ್ತವ್ಯವು-ಪರಮ ಧರ್ಮವು!

ಶಚಿ:—ದಾನವರಾಜನೆ, ಪತಿದೇವರ ಆಜ್ಞೆಯನ್ನು ಉಲ್ಲಂಘಿಸಲಾರೆನು! ಶವವನ್ನು ಕೊಡಲಾರೆನು!

ವೃತ್ರಾಸುರ:— ಪೌಲೋಮಿ, ನೀನು ಅಸುರ ನಂದಿನಿಯು. ದೇವತೆಗಳ ಬಂದಿನಿಯು. ಮಾತೃಕುಲದ ಅಭಿಮಾನವು ನಿನಗೆ ರವಷ್ಟಾದರೂ ಇಲ್ಲವೆ? ದೇವತೆಗಳಿಗೆ ಸಹಾಯಕಳಾಗಿ ಅಸುರಕುಲ ಧ್ವಂಸವನ್ನು ನೋಡಬಯಸಿರುವೆಯಾ? ಬೇಡ. ಹೀಗೆ ನಿರ್ದಯಳಾಗಬೇಡ. ಪಿತೃವಂಶದ ಹಿತಕ್ಕೋಸುಗ ಈ ಶವವನ್ನು ನನಗೆ ದಾನಮಾಡು!

ಇಂದ್ರ:—ಬೇಡ; ಅಸುರನ ಮಾತಿಗೆ ಮೋಹಿತಳಾಗಬೇಡ. ಪತಿಯ ವಚನವನ್ನು ಮೀರಬೇಡ.

ಶಚಿ:—ದಾನವ ರಾಜನೆ, ಕೊಡಲಾರೆನು! ಖಂಡಿತವಾಗಿಯೂ ಕೊಡಲಾರೆನು! ಆ ಪೌಲೋಮಿಯು ಈಗಿಲ್ಲ. ಇವಳು ಇಂದ್ರಾಣಿಯು. ದೇವಿಯು. ದೇವತೆಗಳ ಹಿತಕ್ಕಾಗಿಯೆ ಯುಕ್ತಿಸತಕ್ಕವಳು. ಪರಮಧರ್ಮವಾಗಿದ್ದ ಪತ್ಯಾಜ್ಞಾಪಾಲನೆಯನ್ನು ತಪ್ಪದೆ ಆಚರಿಸತಕ್ಕವಳು! ತಿಳಿಯಿತೆ? ನಿನ್ನಲ್ಲಿ ಶಕ್ತಿಯಿದ್ದರೆ-ನೀನು ನಾರೀವಧೆಗೆ ಅಳುಕದಿದ್ದರೆ-ನನ್ನನ್ನು ಸಂಹರಿಸಿ ಈ ಶವವನ್ನು ಒಯ್ಯಬಹುದು. ನಾನು ಜೀವಿಸಿರುವಾಗ ನಿನಗೆ ಈ ಶವವು ದೊರೆಯದು!

ವೃತ್ರಾಸುರ:—ಹೀಗೋ! ಆಗಲಿ. ನಾನು ಬಲಾತ್ಕಾರದಿಂದ ಈ ಹೆಣವನ್ನೆತ್ತಿಕೊಂಡು ಹೋಗುವೆನು?

(ಶಚಿಯನ್ನು ದೂಡುವನು, ಋಷಿಗಳನ್ನು ಚದರಿಸುವನು, ಹೆಣವನ್ನು ಮುಟ್ಟ ಹೋಗುವನು. ಭಯಕಂಪಿತನಾಗಿ ಪಲಾಯನ ಮಾಡುವನು)

ಇಂದ್ರ:— (ಆನಂದಾತಿರೇಕದಿಂದ ಗಹಗಹಿಸಿ ನಕ್ಕು) ಪ್ರಿಯತಮೆ, ಋಷಿಗಳೆ, ದೇವತೆಗಳೆ, ಪರಮತ್ಯಾಗಿಗಳಾಗಿ ದೇವತೆಗಳ ಹಿತಕ್ಕಾಗಿ ಆತ್ಮಯಜ್ಞಮಾಡಿದ ದಧೀಚಿಋಷಿಗಳ ಅಸ್ಥಿಯು ದಾನವರಾಜನ ಮೃತ್ಯುಬಾಣವಾಗಿದೆ! ಇನ್ನು ನಾವು ಹೆದರುವ ಕಾರಣವಿಲ್ಲ! ಮಹಾತ್ಮರಾದ ದಧೀಚಿಋಷಿಗಳ ಅಸ್ಥಿಯಿಂದ ಆಯುಧವು ಸಿದ್ಧವಾಗಬೇಕು. ಇನ್ನು ನೀವು ಈ ಕೆಲಸಕ್ಕೆ ತೊಡಗಿರಿ ದೇವಶಿಲ್ಪಿಯಿಂದ ಉತ್ತಮವಾದ ಆಯುಧವನ್ನು ತಯಾರಿಸಿರಿ. ಬಳಿಕ ನಾವು ದಾನವರ ಮೇಲೆ ದಂಡೆತ್ತಿ ಹೊರಡೋಣ ಜಯಶಾಲಿಗಳಾಗಿ ತ್ಯಾಗಿವರ್ಯರಾದ ದಧೀಚಿ ಋಷಿಗಳ ಆಶೀರ್ವಚನವನ್ನು ಸಾರ್ಥಕಗೊಳಿಸೋಣ ಮಾತೃಭೂಮಿಯನ್ನು ಪರದಾಸ್ಯದಿಂದುದ್ಧರಿಸಿ ಈ ದೇವಭೂಮಿಯನ್ನು ಸ್ವರ್ಗದಲ್ಲಿ ಮಾರ್ಪಡಿಸೋಣ. ಈ ಸಂತೋಷ ಸಮಯದಲ್ಲಿ ನೀವೆಲ್ಲರು 'ಮಹಾತ್ಮಾ ದಧೀಚ ಮಹಾರಾಜಕೀ ಜಯ!' ಎಂದು ಮೂರು ಸಲ ಜಯಘೋಷ ಮಾಡಿ ಮುಂದಿನ ಕಾರ್ಯಕ್ಕೆ ತೊಡಗಿರಿ.

(ಎಲ್ಲರೂ ಜಯ ಘೋಷ ಮಾಡುವರು)

# ಚತುರ್ಥಾಂಕ.



(ದೇವಶಿಲ್ಪಿಯಾದ *ತ್ವಷ್ಟ್ರನ ಶಿಲ್ಪಶಾಲೆಯು. ವೃದ್ಧನಾಗಿದ್ದರೂ ಬಲಶಾಲಿಯಾಗಿದ್ದ ತ್ವಷ್ಟ್ರನು †ಸೋಮರಸದ ಅಭಾವದ ಮೂಲಕ ಚಟಪಡಿಸುತ್ತಿದ್ದಾನೆ, ‡ಋಭು ಬಾಲಿಕೆಯರು ಪ್ರವೇಶಿಸುವರು.)

ತ್ವಷ್ಟ್ರ:—ಬೆಡಗಿನ ಬಾಲೆಯರೆ, ಬಂದಿರಾ? ಬನ್ನಿರಿ ಒಳ್ಳೆ ಸಮಯಕ್ಕೆ ಬಂದಿರಿ. ನಾನು ನಿಮ್ಮ ದಾರಿಯನ್ನೆ ಕಾಯುತ್ತಿದ್ದೆನು.

೧ನೆಯ ಬಾಲೆ:—ಅಜ್ಜಾ, ನಮ್ಮ ದಾರಿಯನ್ನೇಕೆ ಕಾಯುತ್ತಿದ್ದೆ?

ತ್ವಷ್ಟ್ರ:—ಗಂಟಲು ಒಣಗಿ ಹೋಗಿದೆ. ನಾಲಿಗೆಯು ಸೆಳೆಯುತ್ತಿದೆ. ಮಾತಾಡಲಿಕ್ಕೆ ಬಾರದಾಗಿದೆ!

೨ನೆಯ ಬಾಲೆ:—ಮುತ್ತಾತ್ಯ, ಏನಾಯಿತು?

೩ನೆಯ ಬಾಲೆ:—ಅಜ್ಜಾ, ನೀರು ತಂದು ಕೊಡಲೇನು?

ತ್ವಷ್ಟ್ರ:—ಉಹು....ನೀರು ಬೇಡ!

೧ನೆಯ ಬಾಲೆ:—ಹಾಗಾದರೆ ಏನು ಬೇಕು?

---

* ತ್ವಷ್ಟ್ರನು ದೇವತೆಗಳ ಶಸ್ತ್ರಾಸ್ತ್ರಗಳನ್ನು ತಯಾರಿಸತಕ್ಕವನು. ಪುರಾಣದ ವಿಶ್ವಕರ್ಮನು. ಇವನೇ ಇಂದ್ರನ ವಜ್ರಾಯುಧವನ್ನು ಮಾಡಿಕೊಟ್ಟವನು. (ಋಗ್ವೇದ ಪ್ರಥಮ ಮಂಡಲ ೩೨ನೇ ಸೂಕ್ತ) ತ್ವಷ್ಟ್ರನ ಮಗಳಾದ ಸರನ್ಯುವಿನ ವಿವಾಹವು ವಿವಸ್ವಾನ್ ಅರ್ಥಾತ್ ಸೂರ್ಯನ ಸಂಗಡ ಆಯಿತು.

† ಸೋಮವು ಪರ್ವತದಲ್ಲಿ ಹುಟ್ಟುವ ಮಾದಕಗುಣವಿಶಿಷ್ಟ ಲತೆಯು. ಸೋಮ ಲತೆಯನ್ನು ಹಿಂಡಿದರೆ, ಕೊಂಚ ಹುಳಿಯಾಗಿದ್ದ ಬಿಳೇಬಣ್ಣದ ರಸವು ಹೊರಡುತ್ತಿತ್ತು. ಇದನ್ನೆ ಮಾದಕ ಪದಾರ್ಥದಲ್ಲಿ ರೂಪಾಂತರಗೊಳಿಸಿಕೊಂಡು ಪ್ರಾಚೀನ ಆರ್ಯರು ಯಜ್ಞದಲ್ಲಿ ಉಪಯೋಗಿಸುತ್ತಿದ್ದರು.

‡ ಋಭುಗಳು ತ್ವಷ್ಟ್ರನ ಶಿಷ್ಯರು.

ತ್ವಷ್ಟಾ:—ಸೋಮರಸವು ಬೇಕು. ಬಹು ದಿನಗಳಿಂದ ಸೋಮರಸವು ಸಿಕ್ಕಿಲ್ಲ! ಜೀವವು ತಳಮಳಿಸುತ್ತಿದೆ! [ಬಾಲಿಕೆಯರು ಬಳಿಯಲ್ಲಿದ್ದ ಸೋಮಪಾತ್ರ (ಚಮಸ)ಗಳ ಹತ್ತಿರ ಹೋಗುವರು. ನೋಡುವರು ಬರಿದಾಗಿರುವದನ್ನು ತಿಳಿಯುವರು.]

೧ನೆಯ ಬಾಲೆ:—ಅಜ್ಜಾ, ಪಾತ್ರೆಗಳೆಲ್ಲವೂ ಬರಿದಾಗಿವೆ ಒಂದು ಹನಿ ಸಹ ರಸವಿಲ್ಲ. (ಒಂದು ಪಾತ್ರೆಯನ್ನು ಡಬ್ಬು ಹಾಕಿ ತೋರುವಳು.)

ತ್ವಷ್ಟಾ:—ಹುಡುಗಿಯರೆ, ಪಾತ್ರೆಗಳಲ್ಲಿ ಸೋಮರಸವಿದ್ದರೆ, ನಾನು ಹೀಗೆ ಚಟಪಡಿಸುತ್ತಿದ್ದೆನೆ? ಪಾತ್ರೆಗಳು ಬರಿಯವಾಗಿ ಬಹುದಿನಗಳಾದವು. ಸೋಮರಸವೆಲ್ಲಿಯೂ ದೊರೆಯಲೊಲ್ಲದು. ಕೆಲಸವು ಸಾಗದಾಗಿ ಹೋಗಿದೆ.

೨ನೆಯ ಬಾಲೆ:—ಅಜ್ಜಾ, ನನಗೊಂದು ಹಾರವನ್ನು ಮಾಡಿ ಕೊಡುವೆನೆಂದು ಹೇಳಿದ್ದೆಯಲ್ಲ! ತಯಾರಾಗಿದೆಯೆ? ತೆಗೆ, ನೋಡೋಣ.

೩ನೆಯ ಬಾಲೆ:—ನನಗೆ ಬಂಗಾರದ ವಲಯಗಳನ್ನು ಕೊಡುವೆನೆಂದು ಹೇಳಿದ್ದಿಲ್ಲವೆ? ಕೊಡು.

೪ನೆಯ ಬಾಲೆ:—ನನ್ನ ಚರಣಪದ್ಮಗಳೆಲ್ಲಿವೆ?

೫ನೆಯ ಬಾಲೆ:—ನನ್ನ ಮಾಲೆಯು ನನಗೆ ಇಂದೇ ಬೇಕು!

೬ನೆಯ ಬಾಲೆ:—ನನ್ನ ಕೇಯೂರವೆಲ್ಲಿದೆ? ನಾನು ಬಿಟ್ಟು ಹೋಗುವವಳಲ್ಲ!

ತ್ವಷ್ಟಾ:—ದುಷ್ಟೆಯರೇ, ದೂರ ಹೋಗಿರಿ! (ಹೊಡೆಯ ಹೋಗುವನು; ಬಾಲೆಯರು ಓಡಿಹೋಗುವರು) ಸೋಮರಸವು ಸಿಗದೆ ಎಷ್ಟೋ ದಿನಗಳಾಗಿ ಹೋದವು. ಜೀವವು ಒದ್ದಾಡುತ್ತಿದೆ. ಈ ಕಡೆಗೆ ಯಾರ ಲಕ್ಷ್ಯವೂ ಇಲ್ಲ. ಈ ಹುಡುಗಿಯರು ತಮ್ಮ ವಸ್ತುಬೇಕೆಂದು ಪೀಡಿಸ ಬಂದಿದ್ದಾರೆ! ಸೋಮರಸದ ಅಭಾವದ ಮೂಲಕ ಕೆಲಸವೇ ಸಾಗದಿರುವಾಗ ಇವರಿಗೆ ಅಲಂಕಾರಗಳೆಲ್ಲಿಂದ ಬರಬೇಕು?........

(ಋಭುಗಳು ಬರುವರು)

ಋಭುಗಳು:—ಗುರುಗಳೆ, ನಮಸ್ಕರಿಸುವೆವು ಯಾವ ಕೆಲಸ ನಡಿಸಿರುವಿರಿ? ಎಲ್ಲವೂ ಸರಿಯಾಗಿದೆಯಷ್ಟೆ?

ತ್ವಷ್ಟ್ರಾ:—ಯಾವುದೂ ಸರಿಯಾಗಿಲ್ಲ. ನಿಮ್ಮ ಈ ಬಾಲಿಕೆಯರ ಹಾವಳಿಯನ್ನು ನೋಡಿದಿರಾ? ಒಬ್ಬಳು ಒಂದು ವಸ್ತ್ರವನ್ನು ಬೇಡು ತ್ತಾಳೆ; ಇನ್ನೊಬ್ಬಳು ಮತ್ತೊಂದು ಅಲಂಕಾರವನ್ನು ಕೇಳುತ್ತಿದ್ದಾಳೆ. ಇವರ ಪೀಡೆಯಿಂದ ನಾನು ಬೇಜಾರಗೊಂಡು ಹೋಗಿದ್ದೇನೆ. ನಾನೇನು ಮಾಡಲಿ? ನೀವೆ ಹೇಳಿರಿ! ಎಷ್ಟೋ ದಿನಗಳಿಂದ ಸೋಮರಸವನ್ನು ಕಾಣದೆ ಪ್ರಾಣವು ಒದ್ದಾಡುತ್ತಿದೆ. ಇಂತಹ ಗುಪ್ತಸಮಯದಲ್ಲಿ ನಿಮ್ಮ ಬಾಲೆಯರು ನನ್ನನ್ನು ಕಾಡುತ್ತಿದ್ದಾರೆ! ನಾನು ಒಬ್ಬನು; ಮೇಲಾಗಿ ಮುದುಕನು. ಹೇಗೆ ಇವರೆಲ್ಲರನ್ನು ಸಂಬಾಳಿಸಿಕೊಳ್ಳಲಿ?

ದೂರ ನಿಂತಿದ್ದ ಬಾಲೆಯರು:— ಮುದುಕನೆ, ಸಂಬಾಳಿಸಿಕೊ ಳ್ಳುವದಾಗದಿದ್ದರೆ ಸತ್ತು ಹೋಗು ಯಾಕೆ ಜೀವಿಸಿರುವೆ? ನಿನ್ನ ಸುಡು ಗಾಡ ಮೋರೆಗೆ ಬೆಂಕಿಯು ಹಚ್ಚಲಿ! (ಓಡಿ ಹೋಗುವರು.)

ಋಭುಗಳು:—ಗುರುಗಳೆ, ಬಾಲೆಯರವರು ಅವರ ಮಾ ತನ್ನು ಹಚ್ಚಿಕೊಂಡು ಸಿಟ್ಟಿಗೇಳಬೇಡಿರಿ (ಅತ್ತಿತ್ತ ನೋಡಿ) ಈ ಸೋಮ ಪಾತ್ರೆಯನ್ನು ಹೊಸದಾಗಿ ಮಾಡಿರುವಂತೆ ತೋರುತ್ತಿದೆ. ಒಳ್ಳೆ ಚಂದ ವಾಗಿದೆ!

ತ್ವಷ್ಟ್ರಾ:—ಹುಡುಗಿಯರಂತೆ ನೀವೂ ಹುಡುಗಾಟವೆಬ್ಬಿಸಿದಿರಾ? ನಾನು ನಿಮ್ಮ ಗುರುವಲ್ಲವೆ? ಗುರುವಿಗೆ ಚೇಷ್ಟೆ ಮಾಡಬೇಕೆ? ಶಿಷ್ಯರ ಧರ್ಮವೇನೆಂಬದನ್ನು ಸಂಪೂರ್ಣವಾಗಿ ಮರೆದು ಬಿಟ್ಟಿರಾ?

ಋಭುಗಳು:—ಹುಡುಗಾಟವಾಡಿದವರು ನಾವಲ್ಲ. ನಿಜವಾ ಗಿಯೂ ಈ ಪಾತ್ರೆಯು ಬಹು ಸುಂದರವಾಗಿದೆ?

ತ್ವಷ್ಟ್ರಾ:—ಆದಿರಲಿ ನೀವು ನನ್ನ ಶಿಷ್ಯರು. ನನ್ನಿಂದ ಶಿಕ್ಷಣ

ಹೊಂದಿ ಪ್ರಸಿದ್ಧ ಶಿಲ್ಪಿಗಳಾಗಿರುವಿರಿ. ಈ ವರೆಗೆ ನೀವು ಗುರುದಕ್ಷಿಣೆಯನ್ನು ಸಲ್ಲಿಸಿದವರಲ್ಲ. ಈಗ ನಾನು ನಿಮಗೆ ದಕ್ಷಿಣೆಯನ್ನು ಕೇಳಬೇಕೆಂದಿದ್ದೇನೆ. ಕೊಡುವಿರಾ?

ಋಭುಗಳು:— ಅವಶ್ಯವಾಗಿ ಕೇಳಿರಿ. ಗುರುದಕ್ಷಿಣೆಯನ್ನು ಸಲ್ಲಿಸಿ ಗುರುಭಕ್ತಿಯನ್ನು ಸಾರ್ಥಕಗೊಳಿಸಿಕೊಳ್ಳಲಿಕ್ಕೆ ನಾವು ಉತ್ಸುಕರಾಗಿದ್ದೇವೆ.

ತ್ವಷ್ಟಾ:—ನಾನು ಹೇಳುವದು ಚೇಷ್ಟೆಯಲ್ಲ! ನಿಜವಾಗಿಯೆ ಮಾತಾಡುತ್ತಿರುವೆನು. ನೀವು ಈಗಿಂದೀಗಲೆ ನಾನು ಕೇಳಿದ ವಸ್ತುವನ್ನು ತಂದುಕೊಡಲಿಕ್ಕೆ ಬೇಕು.

ಋಭುಗಳು:—ಸಾಧ್ಯವಿದ್ದರೆ, ಅವಶ್ಯವಾಗಿ ತಂದುಕೊಡುವೆವು.

ತ್ವಷ್ಟಾ:—ನಾನು ಸಾಧ್ಯಾಸಾಧ್ಯಗಳನ್ನು ವಿಚಾರಿಸುವದಿಲ್ಲ ನನಗೆ ಒಂದು ಪದಾರ್ಥವು ಅತ್ಯವಶ್ಯವಾಗಿ ಬೇಕಿದೆ. ನೀವದನ್ನು ತೀವ್ರವೆ ತಂದು ಕೊಡಬೇಕು.

ಋಭುಗಳು:—ಅದಾವುದೆಂಬದನ್ನು ಹೇಳಿಬಿಡಿರಿ.

ತ್ವಷ್ಟಾ:—ನನಗೆ ಸೋಮರಸವು ಬೇಕು! ದೊರೆಯದಿದ್ದರೆ, ನನ್ನ ಪ್ರಾಣ ಉಳಿಯುವಂತಿಲ್ಲ! ನೀವು ಏನಾದರೂ ಮಾಡಿ ನನಗೆ ಸೋಮರಸವನ್ನು ತಂದು ಕೊಡಲೆ ಬೇಕು!

ಗನೆಯ ಋಭು:—ಸ್ವಾಮಿಾ ಗುರುಗಳೆ, ನಮಗೆ ಸೋಮರಸವು ಹೇಗೆ ದೊರೆಯಬೇಕು? ದೇವರಾಜ ಇಂದ್ರನ ದಯದ ಹೊರತು ಸೋಮರಸವು ಸಿಗದು. ಇಂದ್ರನಾದರೊ ದಾನವರ ಬಂದಿಯಾಗಿದ್ದಾನೆ. ಅಂದಬಳಿಕ ನಾವೆಲ್ಲರೂ ಸೋಮರಸದ ಆಶೆಯನ್ನು ಬಿಡಲೆ ಬೇಕು.

ತ್ವಷ್ಟಾ:— ಇನ್ನು ನಮಗ ಸೋಮರಸವು ಸಿಗದೆ? ನೀವು ಸುಳ್ಳು ಹೇಳುತ್ತಿರುವಿರಿ! ಕೈಲಾಗದವರಿರುವಿರಿ! ಪ್ರಯತ್ನ ಮಾಡದವರಾಗಿ ಏನಾದರೊಂದು ನೆವಹೇಳುತ್ತಿರುವಿರಿ!

೨ನೆಯ ಋಭು:—ಗುರುಗಳೆ, ನಾವು ನಿಮ್ಮ ಮುಂದೆ ಸುಳ್ಳು ಹೇಳೇವೆ? ನಿಜವಾಗಿಯೂ ಸೋಮರಸವು ಸಿಗುವಂತಿಲ್ಲ!

ತ್ವಷ್ಟಾ:— ಮೂರ್ಖರು ನೀವು! ಗುರುಭಕ್ತಿಯ ಲೇಶವೂ ನಿಮ್ಮಲ್ಲಿಲ್ಲ!

೩ನೆಯ ಋಭು:—ಸ್ವಾಮೀ, ಸಿಟ್ಟಾಗಬೇಡಿರಿ. ಅಪ್ರಾಪ್ಯವಸ್ತುವನ್ನು ತಂದು ಕೊಡುವುದು ಹೇಗೆ?

ತ್ವಷ್ಟಾ:—ಸೋಮರಸವು ಅಪ್ರಾಪ್ಯವೆ? ಹೀಗೆಂದಿಗೂ ಆಗದು! ದೇವತೆಗಳು ನಾವು! ಸೋಮರಸದಿಂದ ಜೀವಿಸತಕ್ಕವರು! ಹೀಗಿರಲು ಸೋಮರಸವು ಸಿಗದಾದ ಬಳಿಕ ನಾನು ಇಲ್ಲಿರುವದು ಹೇಗೆ? ಈ ಮೊದಲು ಒಬ್ಬ ಅಸುರನು ನನ್ನನ್ನು ಕರೆಯ ಬಂದಿದ್ದನು. ದಾನವ ಸಾಮ್ರಾಟನಾದ ವೃತ್ರಾಸುರನು ಭವ್ಯವಾದದೊಂದು ಅರಮನೆಯನ್ನು ಕಟ್ಟಿಸಬೇಕಾಗಿದೆಯಂತೆ. ಅದಕ್ಕಾಗಿ ಅವನು ನನಗೆ ಆಮಂತ್ರಣ ಕಳುಹಿದ್ದನು; ಆದರೆ ನಾನು ಹೋಗಲಿಲ್ಲ. ಯಾಕೆ ಹೋಗಲಿಲ್ಲವೆಂಬದನ್ನು ನೀವು ಬಲ್ಲಿರಾ?

ಋಭುಗಳು:—ಗುರುಗಳೆ, ಕಾರಣವು ನಮಗೆ ಹೇಗೆ ಗೊತ್ತಾಗಬೇಕು?

ತ್ವಷ್ಟಾ:—ಶುದ್ಧ ಮೂರ್ಖರು ನೀವು! ಈ ಸಹಜ ಕಾರಣವು ಸಹ ನಿಮಗೆ ಹೊಳೆಯಬಾರದೆ? ದಾನವರ ಸನ್ನಿಧಾನದಲ್ಲಿ ಸೋಮರಸವಿಲ್ಲ.

೧ನೆಯ ಋಭು:—ಗುರುಗಳೆ, ಇನ್ನು ಇಲ್ಲಿಯೂ ಸೋಮರಸವಿಲ್ಲದಂತಾಯಿತಲ್ಲ!

ತ್ವಷ್ಟಾ:—ದಡ್ಡನೆ, ಮತ್ತೂ ಅದೇ ಮಾತಾಡುತ್ತಿರುವೆಯಲ್ಲ! ದೇವತೆಗಳಿಗೆ ಸೋಮರಸದ ಅಭಾವವೆಂದಿಗೂ ಆಗದು! ಆಗಳೆ ಅಶ್ವಿನೀಕುಮಾರರು ತಮ್ಮ ಹೆಂಡತಿಯೊಡನೆ ನನ್ನ ಬಳಿಗೆ ಬಂದಿದ್ದರು. ತಿರುಗಿ ಹೊರಡುವ ಕಾಲಕ್ಕೆ ನಾನು ಅವರ ಹೆಂಡತಿಯನ್ನು ತಡೆದಿರಿಸಿಕೊಂ

ಡೆನು. ಸೋಮರಸವನ್ನು ತಂದು ಕೊಟ್ಟು ಹೆಂಡತಿಯನ್ನು ಕರೆದೊಯ್ಯಬಹುದೆಂದು ಹೇಳಿದೆನು ಅಶ್ವಿನೀಕುಮಾರರು ನನ್ನ ಇಚ್ಛೆಯ ಮೇರೆಗೆ ಸೋಮರಸವನ್ನು ತರಲಿಕ್ಕೆ ಹೋಗಿದ್ದಾರೆ. ಬುದ್ಧಿಶಾಲಿಗಳವರು. ಕರ್ತೃತ್ವಶಕ್ತಿಯುಳ್ಳವರವರು ಅವರು ನಿಮ್ಮಂತೆ ಹೇಡಿಗಳಲ್ಲ! ನಿಶ್ಚಯವಾಗಿಯೂ ನನಗೆ ಸೋಮರಸವನ್ನು ತಂದು ಕೊಡುವರು

೨ನೆಯ ಋಭು:—ಗುರುಗಳೆ ನಿಜವಾಗಿ ಮಾತಾಡುತ್ತಿರುವಿರೊ? ಹುಡುಗಾಟಿಕೆಗಾಗಿ ಹೀಗೆ ಹೇಳುತ್ತಿರುವಿರೊ?

ತ್ವಷ್ಟಾ:—ಶಿಷ್ಯರಾದ ನಿಮ್ಮೊಡನೆ ನಾನು ಹುಡುಗಾಟವಾಡಲಿಯಾ? ನನ್ನ ಅಪ್ಪಣೆಯಾಗುವದೊಂದೇ ತಡ, ಅಶ್ವಿನೀಕುಮಾರರು ಸೋಮರಸದ ಶೋಧಕ್ಕೆ ಧಾವಿಸಿ ಹೊರಟರು............

೩ನೆಯ ಋಭು: ಈಗ ಸೂರ್ಯಾದೇವಿ ಎಲ್ಲಿರುವಳು?

ತ್ವಷ್ಟಾ:– ನನ್ನ ಮನೆಯಲ್ಲಿಯೇ ಇರುವಳು. ಅವಳು ನನ್ನ ಮೊಮ್ಮಗಳಾಗಬೇಕು ಸರಳ ಸ್ವಭಾವದ ಬಾಲೆಯವಳು. ಬುದ್ಧಿಮತಿಯು. ಅಜ್ಜನ ಮೇಲೆ ಅವಳ ಮಮತೆ ಬಹಳ ಪತಿಗಳು ಹೋಗುತ್ತಲೆ ಅವಳು ನನ್ನೊಡನೆ ಹುಡುಗಾಟವನ್ನಾರಂಭಿಸಿದಳು. ನನ್ನ ಬಿಳಿಯ ಕೂದಲುಗಳನ್ನೆಲ್ಲ ಕಿತ್ತಿ ಒಗೆದು ಬಿಡುವೆನೆಂದು ಹೇಳಿದಳು; ಆದರೆ ನಾನು ನನಗೆ ಬಿಳಿಯ ಕೂದಲುಗಳೇ ಇಲ್ಲವೆಂದು ಹಾರಿಸಿಕೊಂಡು ಬಿಟ್ಟೆನು! ನನ್ನ ಮಾತು ಕೇಳಿ ಅವಳು ಬಹಳವಾಗಿ ನಕ್ಕಳು! ಬಳಿಕ ಗಾಯನವನ್ನಾರಂಭಿಸಿದಳು. ಹಾಡಿ ಹಾಡಿ ದಣಿದು ಒರಗಿಕೊಂಡು ಬಿಟ್ಟಳು. ಇರಲಿ. ಇನ್ನು ಮಾತು ಸಾಕು. ನಾನು ವಿಲಂಬವನ್ನು ಸಹಿಸದವನಾಗಿರುವೆನು. ನೀವು ಹೋಗಿ ಅಶ್ವಿನೀಕುಮಾರರನ್ನು ಬೇಗನೆ ಕರೆದುಕೊಂಡು ಬನ್ನಿ. ಬಹಳವಾಗಿ ಕೆಲಸ ಮಾಡಬೇಕಿದೆ; ಆದರೆ ಸೋಮರಸವು ಸಿಕ್ಕ ಹೊರತು ಕೆಲಸವು ಮುಂದೆ ಸಾಗುವಂತಿಲ್ಲ. ಬುದ್ಧಿಭ್ರಂಶವಾಗಿ ಹೋಗಿದೆ. ಕೈ ಕಾಲುಗಳಲ್ಲಿ ತ್ರಾಣವಿಲ್ಲದಾಗಿದೆ.

ಮನಸ್ಸಿಗೆ ಉತ್ಸಾಹವಿಲ್ಲದಾಗಿದೆ.

ಋಭುಗಳು:—ಗುರುಗಳೆ, ತಮ್ಮ ಅಪ್ಪಣೆಯಂತೆ ಹೋಗಿಬರುವೆವು; ಆದರೆ ನೀವು ನಮಗೂ ಸೋಮರಸವನ್ನು ಕೊಡಲಿಕ್ಕೆಬೇಕು. ಯಾಕೆಂದರೆ, ಸೋಮರಸದ ಅಭಾವದ ಮೂಲಕ ನಮ್ಮ ಸ್ಥಿತಿಯೂ ನಿಮ್ಮಂತೆಯೆ ಆಗಿದೆ.

ತ್ವಷ್ಟಾ:—ಅಶ್ವಿನೀ ಕುಮಾರರು ತಂದ ಸೋಮರಸವನ್ನು ಮೊದಲು ನಿಮ್ಮ ಕೈಯಲ್ಲಿ ಕೊಡುವೆನು. ಬಳಿಕ ನೀವು ಅದನ್ನು ಗುರು ದಕ್ಷಿಣೆಯೆಂದು ನನಗೆ ಸಮರ್ಪಿಸಿ ಬಿಡಿರಿ. ಇನ್ನು ಮಾತ ಬಳಿಸಬೇಡಿರಿ. ಹೋಗಿರಿ. (ಋಭುಗಳು ಹೋಗುವರು. ತ್ವಷ್ಟಾನು ಒಳಗೆ ಹೋಗುವದರಲ್ಲಿದ್ದನು. ಇಬ್ಬರು ಅಸುರರು ಕಳ್ಳರಂತೆ ಶಿಲ್ಪಶಾಲೆಯನ್ನು ಪ್ರವೇಶಿಸುತ್ತಿರುವದನ್ನು ಕಂಡನು. ತ್ವಷ್ಟಾನು ಅಸುರರಿಗೆ ಒಳಗೆ ಬರಬೇಡಿರಿ, ಹೋಗಿರಿ ಎಂದು ಸೂಚಿಸಿದನು; ಆದರೆ ಅಸುರರು ಹೋಗಲಿಲ್ಲ. ತ್ವಷ್ಟಾನ ಹತ್ತರ ಬಂದು ನಿಂತರು.)

೧ನೆಯ ಅಸುರ:—ದಾನವಕುಲ ಸಾಮ್ರಾಟರಾದ ವೃತ್ರಾಸುರ ಮಹಾರಾಜರು ದೊಡ್ಡ ಅರಮನೆಯನ್ನು ಕಟ್ಟಿಸಬೇಕೆಂದಿದ್ದಾರೆ. ನಿಮ್ಮನ್ನು ಕರೆತರಬೇಕೆಂದು ಹೇಳಿದ್ದಾರೆ. ನೀವು ಇಂದ್ರನ ಅರಮನೆಯನ್ನು ತಲೆಬಾಗಿಸುವಂತಹ ಭವ್ಯಪ್ರಾಸಾದವನ್ನು ಕಟ್ಟಿಕೊಟ್ಟರೆ, ನಮ್ಮ ಮಹಾರಾಜರು ನಿಮಗೆ ಸಾವಿರ ಆಕಳುಗಳನ್ನು ಕೊಡುವರು.

ತ್ವಷ್ಟಾ:—ನಾನು ಈ ಮೊದಲೆ ಉತ್ತರವನ್ನು ಹೇಳಿಕಳುಹಿರುವೆನು. ಮತ್ತೆ ಪೀಡಿಸುವದರಲ್ಲಿ ಪ್ರಯೋಜನವಿಲ್ಲ.

೨ನೆಯ ಅಸುರ:—ನಮ್ಮ ಸಾಮ್ರಾಟರು ನಿಮ್ಮನ್ನು ಒತ್ತಾಯದಿಂದ ಹೊತ್ತುಕೊಂಡು ಹೋಗಲಿಕ್ಕೆ ಸಮರ್ಥರಿದ್ದಾರೆ; ಆದರೆ ಅವರು ಈ ಪ್ರಸಂಗದಲ್ಲಿ ನಿಮ್ಮ ಮೇಲೆ ಬಲುಮೆ ಮಾಡಲಿಕ್ಕೆ ಮನಸ್ಸಿಲ್ಲದವರಾಗಿದ್ದಾರೆ. ಯಾಕೆಂದರೆ, ನಿಮ್ಮನ್ನು ಬಲುಮೆಯಿಂದ ಎಳೆದುಕೊಂಡು ಹೋದರೆ, ನಿಮ್ಮಿಂದ ಅರಮನೆಯ ನಿರ್ಮಾಣಕಾರ್ಯವು ಸರಿಯಾಗಿ

ಸಾಗದೆಂಬದನ್ನು ನೀವರು ಬಲ್ಲವರಾಗಿದ್ದಾರೆ. ಉತ್ತಮ ಶಿಲ್ಪಿಗಳು ವೈ್ಯ ದೋರಲಿಕ್ಕೆ ನಿರ್ಮಾಣಕನ ಮನಃಪ್ರಸನ್ನತೆಯು ಅವಶ್ಯವಾದ್ದು. ಅಂತೆಯೆ ನಮ್ಮ ಮಹಾರಾಜರು ನಿಮ್ಮನ್ನು ಸನ್ಮಾನದಿಂದ ಕರೆತರುವಂತೆ ನಮಗೆ ಆಜ್ಞಾಪಿಸಿದ್ದಾರೆ. ನಡೆಯಿರಿ, ಹೋಗೋಣ.

ತ್ವಷ್ಟ:—ನಾನು ಬರಲಾರೆನು.

೧ನೆಯ ಅಸುರ:—ನಿಮ್ಮ ಇಚ್ಛೆಯಿಲ್ಲದಿದ್ದರೆ ಬಿಡಿರಿ. ಈ ವಿಷಯದಲ್ಲಿ ನಾವು ನಿಮಗೆ ಹೆಚ್ಚಿಗೆ ಆಗ್ರಹ ಮಾಡುವದಿಲ್ಲ. ನಮ್ಮ ಮಹಾರಾಜರು ಮತ್ತೊಂದು ಮಾತನ್ನು ಹೇಳಿಕಳುಹಿದ್ದಾರೆ.

ತ್ವಷ್ಟ:—ಅದೇನು?

೧ನೆಯ ಅಸುರ:—ನೀವು ನಿಮ್ಮ ದೇವತೆಗಳಿಗೆ ಯಾವ ಅಸ್ತ್ರವನ್ನೂ ತಯಾರಿಸಿ ಕೊಡಲಾಗದು. ಇದಕ್ಕಾಗಿ ನಮ್ಮ ಮಹಾರಾಜರು ನಿಮಗೆ ನೀವು ಬೇಡಿದ್ದನ್ನು ದಯಪಾಲಿಸುವರು. ಬಹಳವೇನು? ಏಕಛತ್ರಾಧಿಪತಿಗಳಾದ ಅವರು ನಿಮಗೆ ಒಂದು ಸಣ್ಣರಾಜ್ಯದ ಅರಸೊತ್ತಿಗೆಯನ್ನು ಸಹ ಕೊಡಬಲ್ಲರು. ದಾನವಸಾಮ್ರಾಟರು ಬಹು ಉದಾರರು. ಅವರ ಪ್ರಸನ್ನತೆಯನ್ನು ಪಡೆದರೆ, ನಿಮಗೆ ಯಾವ ಕೊರತೆಯೂ ಉಂಟಾಗದು.

ತ್ವಷ್ಟ:—ಬೇಡ! ನನಗೆ ನಿಮ್ಮ ಸಾಮ್ರಾಟನ ಪ್ರಸನ್ನತೆಯು ಬೇಡ! ಇನಾಮೂ ಬೇಡ! ಹೋಗಿಬಿಡಿರಿ!

೨ನೆಯ ಅಸುರ:—ಏನು ನಮ್ಮ ಸಾಮ್ರಾಟರ ಒಂದು ಸಾಮಾನ್ಯ ವಿನಂತಿಯನ್ನು ಸಹ ಮಾನ್ಯಮಾಡಲಾರಿರಾ? ಪರಿಣಾಮವನ್ನು ವಿಚಾರಿಸಿ ನೋಡಿರಿ! ಎಚ್ಚರಿಕೆಯಿಂದ ಮಾತಾಡಿರಿ!

ತ್ವಷ್ಟ:—ನಿಮ್ಮ ಮಾತು ನನಗೆ ಬೇಕಿಲ್ಲ! ಹೊರಟು ಹೋಗಿರಿ! (ಮತ್ತೆ ಒಳಗೆ ಹೋಗಹತ್ತಿದನು.)

೧ನೆಯ ಅಸುರ:—ಹೋಗಬೇಡಿರಿ. ತುಸ ನಿಲ್ಲಿರಿ. ನಾನು

ಇನ್ನೊಂದು ಮಾತು ಹೇಳಬೇಕಾಗಿದೆ.

ತ್ವಷ್ಟ್ರ:—ಬೇಡ! ನಡೆಯಿರಿ! (ಸೋಮಪಾತ್ರೆಯನ್ನು ಅಸುರರ ಮೇಲೆ ಎಸೆಯ ಹೋಗುವನು. ಅಸುರರು ಪಲಾಯನ ಮಾಡುವರು. ಕಣ್ಣಿಗೆ ಕಾಣದಂತಹ ಸ್ಥಳದಲ್ಲಿ ಅಡಗಿ ಕುಳ್ಳಿರುವರು. ನಿದ್ರೆಯಿಂದೆದ್ದ ಸೂರ್ಯೆಯು ಬರುವಳು. ತ್ವಷ್ಟ್ರವು ಸೋಮಪಾತ್ರೆಯನ್ನು ಹಿಡಿದುಕೊಂಡು ನಿಂತಿರುವದನ್ನು ನೋಡುವಳು ಅಡಗಿದ್ದ ಅಸುರರು ಸೂರ್ಯೆಯನ್ನು ನೋಡಿ ಎತ್ತಿಕೊಂಡೊಯ್ಯುವ ಆಲೋಚನೆಗೆ ತೊಡಗುವರು)

ಸೂರ್ಯೆ:—ಸೋಮರಸವು ಬಂದಿತೆ?

ತ್ವಷ್ಟ್ರ:—(ಹೊರಳಿ ನಿಂತು) ನಿನ್ನ ನಿದ್ರೆಯಾಯಿತೆ?

ಸೂರ್ಯೆ:—ನನಗೆ ನಿದ್ರೆಯು ಹೇಗೆ ಹತ್ತಬೇಕು? ಸೋಮರಸವು ಸಿಗಬಹುದೆ? ಸಿಗಲಿಕ್ಕಿಲ್ಲವೆ? ಸಿಕ್ಕರೆ ಯಾವಾಗ್ಗೆ ಸಿಕ್ಕೀತು? ಇವೇ ಮೊದಲಾದ ಆಲೋಚನೆಗಳಿಂದ ನಿನ್ನ ಮನಸ್ಸು ಹೇಗೆ ಅಸ್ವಸ್ಥವಾಗಿದೆಯೊ, ಹಾಗೆಯೆ ನಾನೂ ಅಸ್ವಸ್ಥಚಿತ್ತಳಾಗಿದ್ದೇನೆ!

ತ್ವಷ್ಟ್ರ:—ನನ್ನಂತೆಯೆ ನಿನ್ನ ನಾಲಿಗೆಯೂ ಒಣಗಿ ಹೋಗಿರಬಹುದಲ್ಲವೆ?

ಸೂರ್ಯೆ:— ಅಜ್ಜಾ, ನಾನೇನು ಹೇಳಲಿ? ನೀನೇ ವಿಚಾರಿಸಿ ನೋಡು. ಅನುಭೋಗಿಸಿ ಮುದುಕನಾಗಿರುವೆ!

ತ್ವಷ್ಟ್ರ:—(ಸೋಮಪಾತ್ರೆಯನ್ನು ಕೆಳಗಿಟ್ಟು) ಪಾನವು ಮೂರು ವಿಧದ್ದಾಗಿದೆ. ಜಲಪಾನವಂತೂ ಸ್ವಾಭಾವಿಕವಾದದ್ದು. ನಿತ್ಯದಲ್ಲೂ ಅನುಭವಕ್ಕೆ ಬರತಕ್ಕದ್ದು. ಇದರಂತೆ ದೇವತೆಗಳಿಗೆ ಸೋಮರಸದ ಪಾನವೂ ನಿತ್ಯದ್ದೆ ಸರಿ! ಒಂದೆರಡು ದಿನ ಇಲ್ಲದಿದ್ದರೂ ನಡೆಯಬಹುದು! ಆದರೆ ಬಹಳ ದಿನವಾದರೆ ನಡೆಯದು! ಈಗ್ಗೆ ಕೆಲವು ದಿನಗಳಿಂದ ಸೋಮರಸವು ಸಿಗದ್ದರಿಂದ ನನ್ನ ಅವಸ್ಥೆಯು ತೀರ ಶೋಚನೀಯವಾಗಿ ಹೋಗಿದೆ! ಇನ್ನಾವ ಪಾನ ಉಳಿಯಿತು? ಮನುಷ್ಯನ ಮನಸ್ಸಿನ ಇನ್ನಾವ ಪಿಪಾಸೆಯುಳಿಯಿತು? ನನಗೆ ಸ್ಮರಣೆಗೆ ಬಾರದಾಗಿದೆ! ಮೊಮ್ಮಗಳೆ, ಆ

ಮೂರನೆಯ ಪಿಪಾಸೆಯನ್ನು ನೀನೆ ನನ್ನ ನೆನಪಿಗೆ ತಂದ ಕೊಡಬೇಕು!

ಸೂರ್ಯೆ:—ಆಜ್ಞಾ, ಹೇಳಲಿಯಾ? ನಿನಗೆ ನೆನಪಾಗಲೊಲ್ಲದೇನು?

ತ್ವಷ್ಟಾ:—ನೆನಪಾಗಲೊಲ್ಲದು. ನೀನೆ ಹೇಳಿ ಬಿಡು.

ಸೂರ್ಯೆ:—ಪ್ರಣಯ ಪಿಪಾಸೆ-ಅಧರರಸ ಪಾನ.

ತ್ವಷ್ಟಾ:—ಸರಿಯಾಗಿ ಹೇಳಿದೆ! ಈಗ ನನ್ನ ಸ್ಮರಣೆಗೆ ಬಂತು! ಲುಪ್ತವಾಗಿದ್ದ ನನ್ನ ಪ್ರಣಯ ಪಿಪಾಸೆಯು ಗತ ಸಂಗತಿಗಳ ಸಂಸ್ಮರಣೆಯಿಂದ ಮತ್ತೆ ಜಾಗ್ರತವಾಯಿತು! (ಸೂರ್ಯೆಯ ಕಡೆಗೆ ನಡೆಯುವನು.)

ಸೂರ್ಯೆ:—ಆಜ್ಞಾ, ನಿನಗೆ ಮುದಿಹುಚ್ಚು ಹಿಡಿದಂತೆ ಕಾಣುತ್ತಿದೆ!

ತ್ವಷ್ಟಾ:—ಅದು ತಾನೇ ತಾನಾಗಿ ನನ್ನನ್ನು ಹಿಡಿದುಕೊಂಡಿಲ್ಲ. ನೀನದನ್ನು ಒತ್ತಾಯದಿಂದ ಕರೆತಂದು ನನ್ನ ಮೇಲೆ ಹರಿಬಿಟ್ಟಿರುವೆ! ನಾನೀಗ ನನ್ನ ಪ್ರಣಯ ಪಿಪಾಸೆಯನ್ನು ಶಾಂತಪಡಿಸಿಕೊಳ್ಳುವೆನು!

ಸೂರ್ಯೆ:—ಅಮ್ಮ ನಿಲ್ಲವಲ್ಲ! ನಿನ್ನ ಈ ಮುದಿ ಹುಚ್ಚನ್ನು ನೋಡಲಾರದೆ, ಅವಳೆಂದೊ ಕಣ್ಣು ಮುಚ್ಚಿಬಿಟ್ಟಿರುವಳು!

ತ್ವಷ್ಟಾ:—ಅಮ್ಮನ ಸ್ಥಳದಲ್ಲಿ ಮೊಮ್ಮಗಳಿರುವೆಯಲ್ಲ! ನನಗೆ ಯಾರಾದರೇನು?

ಸೂರ್ಯೆ:—ಸ್ವಲ್ಪ ತಡೆ. ಮೊಮ್ಮಗಳ ಕೈ ಚನ್ನಾಗಿ ತೋರಿ ನಿನ್ನ ಪ್ರಣಯಪಿಪಾಸೆಯನ್ನು ಶಾಂತಗೊಳಿಸುವೆನು! (ಓಡಿ ಹೋಗುವಳು)

(ತ್ವಷ್ಟಾನು ತನ್ನ ರಸಿಕತೆಯನ್ನು ನೆನೆದು ನಗಹತ್ತಿದನು. ಶಚಿಯೂ ಋಷಿಗಳೂ ದಧೀಚಿಯ ಅಸ್ಥಿಗಳನ್ನು ತಕ್ಕೊಂಡು ಬರುವರು. ಬಲಾಸುರನು ಗುಪ್ತರೀತಿಯಿಂದ ಇವರನ್ನನುಸರಿಸಿಕೊಂಡಿರುವನು. ಋಷಿಗಳೂ ಶಚಿಯೂ ತ್ವಷ್ಟನನ್ನು ಒಂದು ಕೋಣೆಗೆ ಕರೆದೊಯ್ಯುವರು. ಬಾಗಿಲ ಹಾಕಿಕೊಂಡು ಕುಳ್ಳಿರುವರು. ಬಲಾಸುರನು ಕೋಣೆಯ ಬಾಗಿಲಿಗೆ ಹೋಗಿ ನಿಲ್ಲುವನು. ಒಳಗಿನ ಮಾತು ಕೇಳದಿರುವದನ್ನು ತಿಳಿದು ಅಸಮಾಧಾನ ಹೊಂದುವನು. ಮತ್ತೆ ಯಾವ ಯುಕ್ತಿಯನ್ನವಲಂಬಿಸಬೇಕೆಂದು ಗೇನಿಸಹತ್ತುವನು. ಸೂರ್ಯೆಯು ಜೀಕಳಿಯಲ್ಲಿ ನೀರು ತುಂಬಿಕೊಂಡು ಬರುವಳು.)

ಸೂರ್ಯೆ:—ಅಜ್ಞಾ, ನಿನ್ನ ಪಿಪಾಸೆಯು ಶಾಂತವಾಗಬೇಕಲ್ಲವೆ? ನಾನು ಸಿದ್ಧಳಾಗಿ ಬಂದಿರುವೆನು. ಎಲ್ಲಿರುವೆ? (ಅತ್ತಿತ್ತ ನೋಡಿ ಎಲ್ಲಿಯೂ ಕಾಣದಿರಲು) ವೊನ್ಮಗಳಿಗೆ ಹೆದರಿ ಓಡಿ ಹೋಗಿರುವೆಯಷ್ಟೆ. ನೀನು ಎಲ್ಲಿ ಹೋದರೂ ನಾನು ಬಿಡತಕ್ಕವಳಲ್ಲ! ಹುಡುಕಿ ಈ ಜೇಕಳಿಯ ಜಲದಿಂದ ನಿನಗೆ ಸ್ನಾನ ಮಾಡಿಸಿಯೆ ಬಿಡುವೆನು.

(ಅತ್ತಿತ್ತ ಸಂಚರಿಸಿ ಹುಡುಕುವಳು. ಬಲಾಸುರನು ಸೂರ್ಯೆಯನ್ನು ನೋಡುವನು,)

ಬಲಾಸುರ:—(ಸೂರ್ಯೆಯ ಕಡೆಗೆ ಧಾವಿಸಿ ಬಂದು) ಬೆಳಕಿನ ಮಗಳೆ, ಹೊಳಪಿನ ಹೆಂಗುಸೆ, ನೀನಿಲ್ಲಿಯೇಕೆ? (ಸೂರ್ಯೆಯು ತಿರುಗಿ ನಿಂತು ಬಲಾಸುರನನ್ನು ನೋಡುವಳು. ಆಡಗಿದ್ದ ಅಸರರು ಹೊರಬಿದ್ದು ಬರುವರು. ಸೂರ್ಯೆಯನ್ನು ಹೊತ್ತೊಯ್ಯುವ ಉದ್ಯೋಗಕ್ಕೆ ತೊಡಗುವರು. ಬಲಾಸುರನು ಅಡ್ಡಿ ಮಾಡಬೇಕೆಂಬ ಇಚ್ಛೆಯಿಂದ ಒಬ್ಬ ಆಸುರನ ಕೈಯ ಹಿಡಿಯುವನು) ಅಸುರ ಸೈನಿಕರೆ, ನೀವಿದೇನು ಮಾಡುತ್ತಿರುವಿರಿ? ಇವಳನ್ನೇಕೆ ಪೀಡಿಸಬೇಕೆಂದಿರುವಿರಿ?

೧ನೆಯ ಅಸುರ:—ನಾವು ಇವಳನ್ನು ಹೊತ್ತುಕೊಂಡು ಹೋಗಬೇಕಾಗಿದೆ.

ಬಲಾಸುರ:—ಎಲ್ಲಿಗೆ?

೧ನೆಯ ಅಸುರ:—ಅಸುರ ಸಾಮ್ರಾಟ-ವೃತ್ರಾಸುರ ಮಹಾರಾಜರ ಸನ್ನಿಧಿಗೆ.

ಬಲಾಸುರ:—ಅದೇಕೆ?

೧ನೆಯ ಅಸುರ:—ಮಹಾರಾಜರ ಅಪ್ಪಣೆ.

ಬಲಾಸುರ:—ಅಣ್ಣನ ಅಪ್ಪಣೆಯಾಗಿದೆಯೆ? (ನಿಟ್ಟುಸಿರ ಬಿಡುವನು) ಉಪಾಯವಿಲ್ಲ! ಈ ಕೋಮಲೆಯ ದುಃಖವನ್ನು ನಾನು ಹೇಗೆ ಪರಿಹರಿಸಲಿ? (ಆಲೋಚಿಸುವನು.) ಅಣ್ಣನು ದಧೀಚಿಯ ಅಸ್ಥಿಗಳನ್ನು ತಂದುಕೊಟ್ಟರೆ ಇನಾವು ಕೊಡುವೆನೆಂದು ಹೇಳಿದ್ದಾನೆ ನಾನು ಹೇಗಾ

ದರೂ ಮಾಡಿ ದಧೀಚಿಯ ಅಸ್ಥಿಗಳನ್ನು ಒಯ್ಯುವೆನು ಅಣ್ಣನಿಗೆ ಸಮ ರ್ಪಿಸುವೆನು. ಅಣ್ಣನ ಪ್ರಸನ್ನತೆಯನ್ನು ಪಡೆದು, ಈ ಸುಂದರಿಯ ಬಿಡುಗಡೆಯನ್ನು ಬೇಡಿಕೊಳ್ಳುವೆನು. ಸಂತುಷ್ಟನಾಗಿದ್ದ ಅಣ್ಣನು ನನ್ನ ವಿನಂತಿಯನ್ನು ಮಾನ್ಯಮಾಡದಿರನು. (ಸೂರ್ಯೆಯ ಕಡೆಗೆ ನೋಡಿ) ಕೋಮ ಲೆಯೆ, ದುಃಖಿಸಬೇಡ. ಈ ಅಸುರರೊಡನೆ ಹೋಗು. ನಿನಗಿವರಿಂದ ಉಪದ್ರವವಾಗದು. ನಾನು ಸಮಯ ಸಾಧಿಸಿ ಅಣ್ಣನಿಗೆ ಹೇಳಿಕೊಂಡು ನಿನ್ನ ಬಿಡುಗಡೆ ಮಾಡುವೆನು. (ಅಸುರ ಸೈನಿಕರನ್ನುದ್ದೇಶಿಸಿ) ನೀವು ಅಸು ರರು. ಇವಳು ದೇವಿಯು. ಕೋಮಲಾಂಗಿಯು. ಇವಳಿಗೆ ಯಾವ ರೀತಿಯಿಂದಲೂ ಕಷ್ಟಕೊಡಬೇಡಿರಿ. ಇವಳು ತಾನೇ ತಾನಾಗಿ ನಿಮ್ಮ ನ್ನನುಸರಿಸಿ ಬರುವಳು. ಇವಳನ್ನು ಸುರಕ್ಷಿತ ರೀತಿಯಿಂದ ಅಣ್ಣನ ಬಳಿಗೆ ಕರೆದುಕೊಂಡು ಹೋಗಿರಿ.

೧ನೆಯ ಅಸುರ:—ನಿಮ್ಮ ಹೇಳಿಕೆಯಂತೆ ಮಾಡಲಿಕ್ಕೆ ಬರುವ ದಿಲ್ಲ. ಮಹಾರಾಜರ ಅಜ್ಞೆಯ ಮೇರೆಗೆ ನಾವು ಇವಳನ್ನು ಹೊತ್ತು ಕೊಂಡು ಹೋಗಲಿಕ್ಕೆ ಬೇಕು.

ಬಲಾಸುರ:—ಹೊತ್ತುಕೊಂಡು ಹೋಗಲಿಕ್ಕೆ ನಾನು ಬೇಡೆನ್ನು ವದಿಲ್ಲ; ಆದರೆ ನೀವು ಇವಳಿಗೆ ಯಾವ ತರದ ತಾಪವೂ ಉಂಟಾಗದಂತೆ ಎಚ್ಚರಿಕೆಯಿಂದಿರಬೇಕು. ತಿಳಿಯಿತೆ? (ಒಬ್ಬ ಅಸುರನು ಸೂರ್ಯೆಯನ್ನು ಹೊತ್ತುಕೊಂಡು ನಡೆಯುವನು. ಬೇರೊಬ್ಬನು ಅವನನ್ನು ಅನುಸರಿಸಿ ಹೋಗುವನು. ತುಸ ಹೊತ್ತು ಬಲಾಸುರನು ಆ ಕಡೆಗೆ ನೋಡುತ್ತ ನಿಲ್ಲುವನು. ಬಳಿಕ ಹಿಂದಿನ ಅಸುರ ಸೈನಿಕನನ್ನು ಕೂಗುವನು. ಅವನು ಬರುವನು.) ಅವಳು ಅಳುತ್ತಿರುವ ಳಲ್ಲವೆ? ಹೇಗಾದರೂ ಮಾಡಿ ಸಮಾಧಾನ ಪಡಿಸಿರಿ ಜೋಕೆಯಿಂದ ಕರೆದುಕೊಂಡು ಹೋಗಿರಿ ನಿಮ್ಮಿಂದ ಅವಳಿಗೆ ತಿಲಮಾತ್ರವೂ ಪೀಡೆ ಯಾಗಕೂಡದ ! ತಿಳಿಯಿತೆ? (ಸೈನಿಕನು ಹೋಗುವನು. ಬಲಾಸುರನು ಅಸ್ಥಿರ ಚಿತ್ತನಾಗಿ ಅತ್ತಿತ್ತ ಅಡ್ಡಾಡ ಹತ್ತಿದನು. ಅವಕಾಶದಲ್ಲಿ ಇವನಿಗೆ ಕರ್ತವ್ಯದ ಸ್ಮರಣೆ

ಯಾಯಿತು ಕೂಡಲೆ ತ್ವಷ್ಟ್ರನ ಕೋಣೆಯ ಕಡೆಗೆ ಹೋದನು. ಒಳಗಿನವರು ಹೊರಬೀಳು ವರಲ್ಲಿದ್ದರು. ಬಲಾಸುರನು ಬಳಿಯಲ್ಲಿಯೆ ಅಡಗಿ ನಿಂತನು. ಒಳಗಿನವರು ಬಾಗಿಲ ತೆರೆದು ಹೊರಗೆ ಬಂದರು.)

ತ್ವಷ್ಟ್ರ:—ನೀವೆಲ್ಲರೂ ನಿಶ್ಚಿಂತರಾಗಿರಿ. ಮಹಾತ್ಮಾ ದಧೀಚಿ ಋಷಿಗಳ ಈ ಅಸ್ಥಿಗಳಿಂದ ನಾನೊಂದು ಆಯುಧವನ್ನು ಸಿದ್ಧಪಡಿ ಸುವೆನು ಅದು ಪರ್ವತಗಳನ್ನು ಪುಡಿ ಪುಡಿ ಮಾಡುವದು. ಆಕಾಶವನ್ನು ವಿದೀರ್ಣಗೊಳಿಸುವದು. ಸೃಷ್ಟಿಯನ್ನು ಧ್ವಂಸ ಮಾಡುವದು. ಇಂತಹ ಬಲಶಾಲಿಯಾದ ಅಸ್ತ್ರವು ಸಿದ್ಧವಾದ ಬಳಿಕ ನಿಮಗೆ ಭಯವೆಂಬುದಿಲ್ಲ

ಋಷಿಗಳು:—ಆ ಆಯುಧದ ಹೆಸರೇನು?

ತ್ವಷ್ಟ್ರ:—ವಜ್ರ.

ಋಷಿಗಳು:—ನೀನು ವಿವರಿಸಿದಂತೆ ವಜ್ರಾಯುಧದಲ್ಲಿ ಅದ್ವಿತೀಯ ಶಕ್ತಿಯುಂಟಾಗುವದು ನಿಜವಷ್ಟೆ?

ತ್ವಷ್ಟ್ರ:—ನಾನು ಹೇಳಿದ್ದು ನಿಸ್ಸಂದೇಹವಾದ್ದು. ಇನ್ನು ನೀವು ನಿಮ್ಮ ದುಗುಡವನ್ನು ದೂರೀಕರಿಸಿರಿ!

ಋಷಿಗಳು:—ದೇವತೆಗಳ ಶಿಲ್ಪಿಯಾದ ನಿನಗೆ ನಾವು ಶತಶಃ ಧನ್ಯ ವಾದಗಳನ್ನರ್ಪಿಸುವೆವು. ದೇವಶಿಲ್ಪಿಗೆ ಜಯಜಯಕಾರವಿರಲಿ!

ತ್ವಷ್ಟ್ರ:—ಈ ಜಯಜಯಕಾರವು ನನಗಲ್ಲ—ಮಹಾತ್ಮರಾದ ದಧೀಚಿಗಳಿಗೆ ಸಲ್ಲತಕ್ಕದ್ದು. ಯಾವ ಮಹನೀಯನು ದೇವತೆಗಳ ಹಿತ ಕ್ಕಾಗಿ—ದೇವಭೂಮಿಯ ಪಾರತಂತ್ರ್ಯದ ಪರಿಹಾರಕ್ಕಾಗಿ—ಆತ್ಮಯಜ್ಞ ಮಾಡಿ ತ್ಯಾಗದ ಪರಮಾವಧಿಯನ್ನು ತೋರಿರುವನೊ ಅವನು ನಮ್ಮೆಲ್ಲ ರಿಗೂ ವಂದ್ಯನು. ನಮ್ಮ ಜಯಜಯಕಾರಕ್ಕೆ ಪಾತ್ರನು. ಮಹಾತ್ಮಾ ದಧೀಚಿ ಮಹಾರಾಜಕೀ ಜಯ!

ಋಷಿಗಳು:—ದಧೀಚಿ ಮಹಾರಾಜಕೀಜಯ! ಮಹಾತ್ಮಾ ದಧೀಚಿ ಮಹಾರಾಜಕೀ ಜಯ!

ತ್ವಷ್ಟಾ:—ನಾನು ವಜ್ರಾಯುಧವನ್ನು ನಿರ್ಮಿಸಲಿಕ್ಕೆ ತೊಡಗಬೇಕಾದರೆ, ನನಗೆ ಮೊದಲು ಸೋಮರಸವು ಬೇಕು. ಸೋಮರಸವಿಲ್ಲದೆ ನನ್ನ ಕಾಲು ಮುಂದೆ ಸರಿಯದು. ಕೈಯು ಸಂಚಲಿಸದು. ಅಕಲು ಹರಿಯದು.

ಋಷಿಗಳು:—ಸೋಮರಸವೆಲ್ಲಿ? ಈ ಸಮಯದಲ್ಲಿ ಅದು ನಮಗೆ ಹೇಗೆ ದೊರೆಯಬೇಕು?

(ಅಶ್ವಿನೀಕುಮಾರರು ಬರುವರು.)

ಅಶ್ವಿನೀಕುಮಾರರು:—ಇಲ್ಲಿ ನೋಡಿರಿ. ನಮ್ಮ ಕೈಯಲ್ಲಿ ಸೋಮಲತೆಯಿದೆ. (ಸೋಮಲತೆಯನ್ನು ತ್ವಷ್ಟಾನ ಮುಂದೆ ಹಿಡಿದು) ಬೇಕಾದಷ್ಟಿದೆ. ತಕ್ಕೊ. ಅವಳೆಲ್ಲಿ?

ತ್ವಷ್ಟಾ:—ಒಳಗಿರುವಳು ನಡೆಯಿರಿ. (ಅಶ್ವಿನೀಕುಮಾರರು ಭರದಿಂದ ಹೋಗುವರು.) ಋಷಿಗಳೆ, ನೀವೂ ಒಳಗೆ ನಡೆಯಿರಿ. ಬೇಗನೆ ಸೋಮರಸವನ್ನು ಸಿದ್ಧಗೊಳಿಸಿರಿ.

ಒಬ್ಬ ಋಷಿ:—ನನ್ನ ಕೈಯಲ್ಲಿ ಅಸ್ಥಿಯ ಗಂಟಿದೆ. ತಕ್ಕೊಂಡು ಬರಲಿಯಾ? ಇಲ್ಲವೆ ಇಲ್ಲಿಯೆ ಇಡಲಿಯಾ?

ತ್ವಷ್ಟಾ:—ಇನ್ನು ಆ ಅಸ್ಥಿಗಳಿಂದ ಪ್ರಯೋಜನವಿಲ್ಲ. ನಾನು ಬಾಹುವಿನ ಅಸ್ಥಿಗಳನ್ನು ಕಡಿದಿಟ್ಟುಕೊಂಡಿದ್ದೇನೆ. ನನ್ನ ಕೆಲಸಕ್ಕೆ ಅದೊಂದು ಅಸ್ಥಿಯಾದರೆ ಸಾಕು. ಈಗ ನನಗೆ ಬೇಕಾದ್ದು ಕೇವಲ ಸೋಮರಸ! ಮತ್ತೇನೂ ಬೇಡ! (ಹೋಗುವನು ಋಷಿಗಳು ಅಸ್ಥಿಯ ಗಂಟನ್ನು ಒಂದು ಕಂಬಕ್ಕೆ ತೂಗಹಾಕಿ ತ್ವಷ್ಟಾನನ್ನು ಅನುಸರಿಸುವರು. ಶಚಿಯು ಬಂದಿರುವಳು.)

ಒಬ್ಬ ಋಷಿ:—ದೇವಿ, ನೀನೂ ಒಳಗೆ ಬಾ.

ಶಚಿ:—(ಅಸ್ಥಿಗಳನ್ನು ತೂಗಹಾಕಿದ್ದ ಕಂಬದ ಮುಂದೆ ಹೋಗಿ ನಿಲ್ಲುವಳು. ಕ್ಷಣಕಾಲ ದಿಟ್ಟಿಸಿ ನೋಡುವಳು. ಅಸ್ಥಿಗಳಿಂದ ನಿರ್ಮಿತವಾದ ವಜ್ರದಿಂದ ಪಿತೃಕುಲ

ಸಂಹಾರವಾಗುವದನ್ನು ಭಾವಿಸಿ ವ್ಯಥೆಗೊಳ್ಳುವಳು.) ಅಪ್ಪಾ, ನಾನು ಅಸುರ ನಂದಿನಿಯಲ್ಲವೆ? ನನ್ನನ್ನೇಕೆ ಪ್ರೀತಿಸಿದೆ? ಉಳಿದ ಅಸುರರನ್ನೇಕೆ ದ್ವೇಷಿಸಿದೆ? ಅವರು ದುಷ್ಟರಿರುವರೆಂದು ನೀನವರನ್ನು ತಿರಸ್ಕರಿಸಿದೆಯಾ? ಅವರು ತಾಮಸಗುಣ ಪ್ರಧಾನರೆಂದು ನೀನವರ ವೈರಕ್ಕೆ ಪ್ರವೃತ್ತನಾದೆಯಾ? ಮಹಾತ್ಮನಾದ ನೀನಿಂತು ಕಠೋರನಾದ್ದೆಂತು? ಪ್ರೇಮುಳ ವ್ಯವಹಾರದಿಂದ ಹೇಗೆ ನನ್ನ ಹೃದಯವನ್ನು ಜಯಿಸಿದೆಯೊ, ಹಾಗೆಯೆ ಉಳಿದ ಅಸುರರನ್ನೂ ಜಯಿಸಲಿಕ್ಕಾಗುತ್ತಿರಲಿಲ್ಲವೇನು? ಮಹನೀಯನಾದ ನಿನಗೆ ಯಾವುದು ತಾನೇ ಅಸಾಧ್ಯ? ಹೀಗಿರಲು ಪ್ರೇಮದಿಂದಾಗಕ್ಕ ಕಾರ್ಯವನ್ನು ವೈರದಿಂದ ಸಾಧಿಸಿಕೊಳ್ಳಲಿಕ್ಕೇಕೆ ಮನಸ್ಸು ಮಾಡಿದೆ? ಈ ವೈರವು ನಿನ್ನ ಮಹತಿಗೆ ಕಲಂಕಸ್ವರೂಪವು! ನೀನು ದೇವತೆಗಳನ್ನು ಪ್ರೀತಿಸಿದಂತೆ ಅಸುರರನ್ನೇಕೆ ಪ್ರೀತಿಸಲಿಲ್ಲ? ನಿನಗೆ ಇಬ್ಬರೂ ಸಮಾನರಲ್ಲವೆ? ವಿರಕ್ತನಾಗಿದ್ದ ನೀನು ಒಂದು ಪಕ್ಷವನ್ನು ವಹಿಸಿದ್ದೇಕೆ? ಅಸುರಕುಲ ಸಂಹಾರಕ್ಕೋಸುಗ ಅಸ್ಥಿಗಳಲ್ಲಿ ಅದ್ವಿತೀಯ ಶಕ್ತಿಯನ್ನಿರಿಸಿ ಕೊಂಡದ್ದೇಕೆ? ನಿನ್ನ ಈ ಕೆಲಸಕ್ಕಾಗಿ ದೇವತೆಗಳು ತಮ್ಮ ಹಿತವನ್ನು ಮನದಂದು ತ್ಯಾಗಿವರ್ಯನೆಂದು ನಿನ್ನನ್ನು ಗೌರವಿಸುತ್ತಿರುವಂತೆ ಅಸುರರು ದೀರ್ಘದ್ವೇಷಿಯೆಂಬ ದುರ್ನಾಮವನ್ನಿತ್ತು ಹಳಿಯುವದು ಸ್ವಾಭಾವಿಕವಲ್ಲವೆ? ಈ ದುರ್ನಾಮವನ್ನು ಕೊಳ್ಳುವದು ನಿನಗೇಕೆ ಬೇಕಾಗಿತ್ತು?

(ಋಷಿಗಳು ಶಚಿಯ ಮಾತುಗಳನ್ನು ಕೇಳಿ ವಿಸ್ಮಿತರಾದರು. ಪರಸ್ಪರರ ಮುಖಾವಲೋಕನ ಮಾಡಹತ್ತಿದರು. ಕೋಪಗೊಂಡರು.)

ಒಬ್ಬ ಋಷಿ:—ಹೀಗೆ ಅನ್ನುವದು ಸರಿಯಲ್ಲ. ಒಳಗೆ ಬಾ. (ಶಚಿಯು ಬೇರೆ ಮಾತಾಡದೆ ಋಷಿಗಳನ್ನನುಸರಿಸಿ ನಡೆದಳು. ಅಲ್ಪಾವಧಿಯಲ್ಲಿ ಬಲಾಸುರನು ಬಂದನು. ಅಸ್ಥಿಯ ಗಂಟನ್ನು ತೆಗೆದುಕೊಂಡು ಪಲಾಯನ ಮಾಡಿದನು. ಅತ್ತ ಅಶ್ವಿನೀಕುಮಾರರು ಒಳಗೆ ಹೋಗಿ ನೋಡಿದರು. ಸೂರ್ಯೋದಯವಿರಲಿಲ್ಲ. ಗಾಬರಿಯಾಗಿ ಅತ್ತಿತ್ತ ಹುಡುಕಿದರು. ಎಲ್ಲಿಯೂ ಕಣ್ಣಿಗೆ ಬೀಳದಿರಲು ಹುಚ್ಚರಂತಾಗಿ

ಹೋದರು. ಶಿಲ್ಪಶಾಲೆಯಿಂದ ಯಾರಿಗೂ ಹೇಳದೆ ಕೇಳದೆ ಹೊರಬಿದ್ದು ಸೂರ್ಯ ಯನ್ನು ಹುಡುಕುತ್ತ ನಡೆದರು )

(ವೃತ್ರಾಸುರನು ಬರುವನು.)

ವೃತ್ರಾಸುರ:—(ಸಮಾಧಾನದ ಉಸಿರ್ಗರೆದು) ನಾನು ನಿಶ್ಚಿಂತನಾದೆನು? ದೇವತೆಗಳೆ, ಋಷಿಗಳೆ, ನಿರ್ಭಯನಾದ ನಾನು ಇನ್ನು ನಿಮಗೆ ಚನ್ನಾಗಿ ನನ್ನ ಕೈಯ ತೋರುವೆನು! ನನ್ನ ಮೃತ್ಯುಬಾಣವಾಗಿದ್ದ ದಧೀಚಿಯ ಅಸ್ಥಿಯಿಂದ ನೀವು ಗರ್ವಿತರಾಗಿದ್ದಿರಷ್ಟೆ? ಈಗ ಆ ಅಸ್ಥಿಯೆಲ್ಲಿ? ಬಲಾಸುರನ ಸಹಾಯದಿಂದ ನನ್ನ ಕೈವಶವಾಗಿ ಹೋಗಿದೆ. ಇನ್ನು ನಾನು ಯಾರಿಗೆ ಹೆದರಲಿ? ಏಕೆ ಹೆದರಲಿ? ಸಂಪೂರ್ಣ ನಿರ್ಭಯನು ನಾನು!

(ಶಚಿಯು ಹೊರಗೆ ಬರುವಳು. ಆ ಸ್ಥಂಬದ ಹತ್ತರ ಹೋಗಿ ನೋಡುವಳು. ಅಸ್ಥಿಯ ಗಂಟನ್ನು ಕಾಣದೆ ಅತ್ತಿತ್ತ ನೋಡುವಳು. ವೃತ್ರಾಸುರನು ಕಣ್ಣಿಗೆ ಬೀಳುವನು. ಗಾಬರಿಯಾಗುವಳು.

ವೃತ್ರಾಸುರ:—(ಶಚಿಯ ಬಳಿಗೆ ಹೋಗಿ) ಪೌಲೋಮಿ, (ಶಚಿಯು ಸುಮ್ಮನಿರುವಳು) ನಾನು ಪೌಲೋಮಿಯೆಂದು ನಿನ್ನನ್ನು ಸಂಬೋಧಿಸ ಕೂಡದೆ? ಆಗಲಿ, ಇಂದ್ರಾಣಿ.

ಶಚಿ:—ನೀನು ಮಾತಾಡುವದು ಬೇಡ. ಇಲ್ಲಿ ನಿಲ್ಲಬೇಡ. ಬೇಗನೆ ಪಲಾಯನ ಮಾಡು.

ವೃತ್ರಾಸುರ:—ಪಲಾಯನ ಮಾಡಲಿಕ್ಕೆ ನಾನಿಲ್ಲಿಗೆ ಬಂದವನಲ್ಲ! ನೀನು ನಿನ್ನ ಪತಿಯನ್ನು ಪ್ರೀತಿಸುವಿಯೊ ಇಲ್ಲವೊ ಎಂಬುದನ್ನು ಕೇಳಿ ಕೊಳ್ಳುವದಕ್ಕೆ ಬಂದಿದ್ದೇನೆ.

ಶಚಿ:—ನಿನ್ನ ಈ ಪ್ರಯತ್ನವು ನಿರರ್ಥಕವಾದದ್ದು!

ವೃತ್ರಾಸುರ:—ಏಕೆ?

ಶಚಿ:—ಸತಿಯರೆಲ್ಲರೂ ತಮ್ಮ ಪತಿಯನ್ನು ಪ್ರೀತಿಸುವದು ಸಹಜವಾದುದು! ಇದರಲ್ಲಿ ಕೇಳಿ ತಿಳಿದುಕೊಳ್ಳುವಂಥದೇನೂ ಇಲ್ಲ!

ವೃತ್ರಾಸುರ:—ನಿನ್ನ ಮಾತನ್ನು ಕೇಳಿ ಪರಮಾನಂದಿತನಾದೆನು. ನೀನು ಅಸುರನಂದಿನಿಯು. ಅಸುರರಮಣಿಗೆ ಯೋಗ್ಯವಾದ ಉತ್ತರವನ್ನೆ ನಿನ್ನ ಮುಖದಿಂದ ಕೇಳಿಕೊಂಡಂತಾಯಿತು. ನಾನು ನಿನಗೆ ಇನ್ನೊ ಒಂದು ಪ್ರಶ್ನೆಯನ್ನು ಮಾಡಬೇಕಾಗಿದೆ. ನಿನ್ನಿಂದ ಉತ್ತರವನ್ನು ಕೇಳಿ ಕೊಳ್ಳಬೇಕಾಗಿದೆ. ಹೇಳುವಿಯಾ? ಪ್ರಶ್ನೆಯು ಅಷ್ಟೊಂದು ಮಹತ್ವ ದಲ್ಲ. ಉತ್ತರವೂ ದೊಡ್ಡದಲ್ಲ. ಆದರೂ ನಾನದನ್ನು ಕೇಳಲೆಬೇಕು. ಪೌಲೋಮಿ, ನೀನು ನಿನ್ನ ಪತಿಯನ್ನು ಪ್ರೀತಿಸುತ್ತಿರುವಂತೆ, ಮಾತೃ ಕುಲವನ್ನೂ ಪ್ರೀತಿಸುತ್ತಿರಬಹುದಲ್ಲವೆ?

ಶಚಿ:—ನಿಶ್ಚಯವಾಗಿಯೂ ಪ್ರೀತಿಸಿರುವೆನು.

ವೃತ್ರಾಸುರ:—ನಾನು ನಿನ್ನ ತಂದೆಯ ಕೊಲೆಯು ಮಾಡಿರುವದು ನಿಜವು. ನಿನ್ನ ವಿಷಯದಲ್ಲಿ ಅಕ್ಷಮ್ಯವಾದ ಅಪರಾಧ ಮಾಡಿರುವದು ಸತ್ಯವಾದ್ದು; ಆದರೆ ನಿಷ್ಕಾರಣವಾಗಿ ನಾನು ಹತ್ಯೆಯನ್ನು ಮಾಡಿದ ವನಲ್ಲ. ಹಲವು ಉದಾತ್ತ ಉದ್ದೇಶಗಳನ್ನಿಟ್ಟುಕೊಂಡು ನಾನು ನಿನ್ನ ತಂದೆಯನ್ನು ಕೊಂದೆನು. ನಿನ್ನ ತಂದೆಯು ಅಪಮಾನಕಾರಕ ಕರಾ ರುಗಳನ್ನು ಸ್ವೀಕರಿಸಿ ದೇವತೆಗಳೊಡನೆ ಒಪ್ಪಂದ ಮಾಡಿಕೊಳ್ಳಲಿಕ್ಕೆ ಸಿದ್ಧನಾಗಿದ್ದನು; ಹಾಗು ನಿನ್ನನ್ನು ದೇವತೆಗಳಿಗೆ ಕೊಟ್ಟು ಲಗ್ನಮಾಡುವ ಸಿದ್ಧತೆಗೆ ತೊಡಗಿದ್ದನು. ಈ ಎರಡು ಸಂಗತಿಗಳನ್ನು ತಿಳಿದು ನನ್ನಿಂದ ಸಹಿಸುವದಕ್ಕಾಗಲಿಲ್ಲ. ನಾವು ದೇವತೆಗಳಿಗಿಂತ ತಿಲಮಾತ್ರವೂ ಹೀನ ರಲ್ಲವಷ್ಟೆ ಅಲ್ಲ; ಶೌರ್ಯ-ಸಾಹಸಾದಿ ಉಪಯುಕ್ತ ಗುಣಗಳಲ್ಲಿ ಅವರಿ ಗಿಂತ ಶ್ರೇಷ್ಠರು. ಹೀಗಿದ್ದು, ದಾನವರಿಗೆ ಕುಂದು ತರುವಂತಹ ಮಾತು ಗಳನ್ನು ಒಪ್ಪಿಕೊಂಡು ಒಪ್ಪಂದ ಮಾಡಿಕೊಳ್ಳಬಯಸುವದು ಅನುಚಿತ ವಲ್ಲವೆ? ದಾನವರಲ್ಲಿ ನಿನಗೆ ಯೋಗ್ಯರಾದ ಉತ್ತಮೋತ್ತಮ ವರರು ಹಲವರಿರಲು ಅವರನ್ನು ಉಪೇಕ್ಷಿಸಿ, ವಿಲೋಮ ವಿವಾಹ ಮಾಡಿ ನಿನ್ನನ್ನು ಕುಲಗೆಡಿಸುವದು ಅಯೋಗ್ಯವಲ್ಲವೆ? ಮತ್ತೊಂದು ಮಾತೆಂ

ದರೆ, ನಾನು ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದೆನು. ನಿನ್ನ ವಿವಾಹಕ್ಕೆ ಹಾತೊರೆಯುತ್ತಿದ್ದೆನು, ಆದರೆ ನಿನ್ನ ಪಿತನು ನನ್ನ ಬೇಡಿಕೆಯನ್ನು ಅವಮಾನ್ಯಮಾಡಿ, ಅಸುರಕುಲಕ್ಕೆ ತಾಗುವಂಥ ಕಟುವಚನಗಳನ್ನುಚ್ಚರಿಸಿ, ನಿನ್ನನ್ನು ದೇವರಾಜನಿಗೆ ಕೊಡುವೆನೆಂದು ಸ್ಪಷ್ಟವಾಗಿ ಹೇಳಿಬಿಟ್ಟನು! ಈ ಮಾತಿನಿಂದ ನನ್ನ ವಿವೇಚನಶಕ್ತಿಯು ಪೂರಾ ಅಳಿದುಹೋಯಿತು! ಕ್ರೋಧಾಂಧನಾದ ನಾನು ಹಿಂದು ಮುಂದಿನ ವಿಚಾರವನ್ನು ಮಾಡದೆ, ನಿನ್ನ ತಂದೆಯನ್ನು ಸಂಹರಿಸಿಬಿಟ್ಟೆನು! ಇದರಲ್ಲಿ ನನ್ನ ಅಪರಾಧವೆಷ್ಟೆಂಬುದನ್ನು ವಿಚಾರಿಸಿ ನೋಡು! ಇನ್ನೊಂದು ಮಾತೆಂದರೆ, ನಿನ್ನ ತಂದೆಯ ಕೊಲೆಯನ್ನು ಮಾಡಿದವನು ನಾನೊಬ್ಬನು ಮಾತ್ರ! ಆ ಕೊಲೆಯ ವ್ಯಾಪಾರದಲ್ಲಿ ಉಳಿದ ಯಾವ ಅಸುರನ ಸಂಬಂಧವೂ ಇಲ್ಲ! ನನ್ನ ಒಂದು ಅಪರಾಧಕ್ಕಾಗಿ ನೀನು ನಿರಪರಾಧಿಗಳಾದ ಅಸಂಖ್ಯ ಅಸುರರನ್ನು ಹೀಯಾಳಿಸುವದು ಉಚಿತವಾದೀತೇನು? ನೀನು ದಾನವಕುಲ ಸಂಭೂತೆಯು. ನಿನ್ನ ಪ್ರತಿಯೊಂದು ನರದಲ್ಲಿ ದಾನವ ರಕ್ತವು ಹರಿಯುತ್ತಿದೆ. ಹೀಗಿದ್ದು ನೀನು ಅಸಂಖ್ಯ ದಾನವರ ಸಂಹಾರವನ್ನು ಕಣ್ಮುಟ್ಟ ಕಾಣಬಯಸುವೆಯಾ? ಪಿತೃಕುಲಧ್ವಂಸದ ಈ ಕಾರ್ಯಕ್ಕೆ ಸಹಾಯಕಳಾಗುವೆಯಾ?

ಶಚಿ:—ಇಲ್ಲ!

ವೃತ್ರಾಸುರ:—ಹೀಗಿದ್ದರೆ ನೀನು ನನ್ನೊಡನೆ ಹೊರಡು. ನಾನು ನಿನ್ನನ್ನು ನಿನ್ನ ತಂದೆಯ ರಾಜ್ಯಕ್ಕೆ ಕರೆದೊಯ್ಯುವೆನು. ಪ್ರಜೆಗಳು ಅತ್ಯುತ್ಸಾಹದಿಂದ ನಿನ್ನ ಸ್ವಾಗತ ಮಾಡುವರು. ನಾನು ನಿನ್ನ ತಂದೆಯ ಸಾರ್ವಭೌಮ ಸಿಂಹಾಸನದ ಮೇಲೆ ನಿನ್ನನ್ನು ಕುಳ್ಳಿರಿಸುವೆನು. ರಾಜ್ಯ ಕಾರಭಾರವನ್ನು ನಿನ್ನ ಸ್ವಾಧೀನಪಡಿಸುವೆನು. ಪ್ರಜೆಗಳೆಲ್ಲರೂ ನಿನ್ನ ಆಜ್ಞಾನುವರ್ತಿಗಳಾಗಿರುವಂತೆ ಮಾಡುವೆನು. ನೀನು ನಿನ್ನ ಇಷ್ಟವಿರುವಂತೆ ರಾಜ್ಯದಾಡಳಿತೆಯನ್ನು ಸಾಗಿಸಬಹುದು. ನಾನು ನಿನ್ನ ರಾಜ್ಯ ಕಾರಭಾರದಲ್ಲಿ ಕೊಂಚವೂ ಕೈ ಹಾಕುವದಿಲ್ಲ. ಇನ್ನು ನನಗೆ ಏನೂ

ಬೇಡ! ಸಾಮ್ರಾಜ್ಯವು ಬೇಡ! ರಾಜ್ಯವು ಬೇಡ! ದೇವತೆಗಳೊಡನೆ ಯುದ್ಧ ಮಾಡುವದು ಬೇಡ! ದಾನವಕುಲಧ್ವಂಸ ಲೀಲೆಯನ್ನು ನೋಡುವುದು ಬೇಡ! ಪ್ರೇಮ ಪರಿಹಾಸದ ಮರ್ಮಾಂತಿಕ ಯಾತನೆಯನ್ನು ಹೇಗಾದರೂ ಮಾಡಿ ಸಹಿಸಿದ್ದೆನು; ಆದರೆ ಇನ್ನು ಒದಗಬಹುದಿದ್ದ ಅಸುರ ಕುಲ ಸಂಹಾರದ ಮಹಾಯಜ್ಞದ ಭಯಂಕರ ದೃಶ್ಯವನ್ನು ನೋಡಿ ಸಹಿಸುವ ಶಕ್ತಿ ನನ್ನಲ್ಲುಳಿದಿಲ್ಲ! ನಾನಿನ್ನು ಸಂಸಾರವನ್ನು ತೊರೆದು ವಿರಕ್ತನಾಗಿ ನಿಬಿಡಾರಣ್ಯವನ್ನು ಪ್ರವೇಶಿಸುವೆನು! (ಕಣ್ಣೀರುದುರಿಸುವನು. ಶಚಿಯು ವಿಚಲಿತಳಾಗುವಳು. ಋಷಿಗಳು ಬಾಗಿಲವನ್ನು ತೆರೆದು ನೋಡುವರು. ಕುಪಿತರಾಗುವರು. ಅಸ್ಥಿಯು ಗಂಟು ಇಲ್ಲದಿರುವುದನ್ನು ಕಂಡು ಮತ್ತಷ್ಟು ಕೋಪಗೊಳ್ಳುವರು. ಮತ್ತೆ ಒಳಗೆ ಹೋಗುವರು. ಜೋರಿನಿಂದ ಬಾಗಿಲ ಹಾಕಿಕೊಳ್ಳುವರು. ಶಚಿಯು ಚಮಕಿತಳಾಗಿ ಹೊರಳಿ ನೋಡುವಳು.)

ಶಚಿ:—ದಾನವರಾಜನೆ, ನೀನೀಗ ಹೋಗು. ನಾನು ವಿಚಾರಿಸಿ ನೋಡುವೆನು. ಋಷಿಗಳಿಗೆ ಹೇಳಿಕೊಳ್ಳುವೆನು. ಅವರ ಆಲೋಚನೆಯನ್ನು ಕೇಳಿಕೊಂಡು ಯಾವುದೊಂದನ್ನು ನಿರ್ಧರಿಸಿಕೊಳ್ಳುವೆನು. (ಬಾಗಿಲ ಬಳಿಗೆ ಹೋಗಿ ಬಾಗಿಲವನ್ನು ತಟ್ಟುವಳು. ಬಾಗಿಲವು ತೆರೆಯಲಿಲ್ಲ.) ಬಾಗಿಲವನ್ನು ತೆರೆಯಿರಿ (ಒಂದು ಕಿಡಕಿಯ ಬಾಗಿಲವು ಉನ್ಮುಕ್ತವಾಯಿತು. ಇಬ್ಬರು ಋಷಿಗಳು ಕಾಣಿಸಿಕೊಂಡರು) ಬಾಗಿಲವನ್ನು ತೆರೆಯಿರಿ.

ಒಬ್ಬ ಋಷಿ:—ಬಾಗಿಲವನ್ನು ತೆರೆಯುವದಿಲ್ಲ!

ಶಚಿ:—ಅದೇಕೆ?

ಋಷಿ:—ಕಾರಣವನ್ನು ಕೇಳಕೂಡದು! (ಕಿಡಕಿಯ ಬಾಗಿಲವನ್ನು ಮುಚ್ಚಿಕೊಳ್ಳುವನು.)

(ಶಚಿಯು ಆಕ್ರೋಶ ಮಾಡುತ್ತ ಬಿದ್ದು ಬಿಡುವಳು.)

ವೃತ್ರಾಸುರ:—(ಶಚಿಯ ಹತ್ತರ ಬಂದು ಮೊಳಕಾಲೂರಿ ಕುಳಿತು) ಪೌಲೋಮಿ, ದುಃಖಿಸದಿರು. ನನ್ನೊಡನೆ ಹೊರಡು.

ಶಚಿ:—ಒಲ್ಲೆನು! ನಾನು ನಿನ್ನ ಸಂಗಡ ಬರಲಾರೆನು!

ವೃತ್ರಾಸುರ:—ನೀನು ನನ್ನ ಮಾತಿನಲ್ಲಿ ವಿಶ್ವಾಸವಿರಿಸುವದಿಲ್ಲವೆ? ದಾನವದುಹಿತೆಯಾಗಿ ದಾನವನಾದ ನನ್ನನ್ನು ನಂಬಲಾರೆಯಾ? ನಾನು ನಿನಗೆ ಬೇಕಾದ ಸಹಾಯುವನ್ನು ಮಾಡಲಿಕ್ಕೆ ಮುಂದರಿದು ಬಂದಾಗ ನೀನು ನನ್ನನ್ನು ಉಪೇಕ್ಷಿಸುತ್ತಿರುವೆಯಲ್ಲವೆ? ಆಗಲಿ ನಾನು ಇನ್ನು ಕೊನೆಯ ಒಂದೇ ಒಂದು ಮಾತನ್ನು ಹೇಳಿಡುವೆನು, ಕೇಳಿಕೊಳ್ಳು ನಿನ್ನ ಇಚ್ಛೆಯಂತೆ ವರ್ತಿಸು. ಈಗ ನೀನು ನನ್ನ ಬೆನ್ನು ಹತ್ತಿ ಬಂದರೆ, ನಿನ್ನ ಪತಿಯನ್ನು ಕಾಣುವೆ-ನನ್ನ ಬಂಧನದಿಂದ ಬಿಡುಗಡೆ ಹೊಂದಿದ ಪತಿಯೊಡನೆ ಸುಖಿಸುವೆ ಇಲ್ಲವಾದರೆ, ಇನ್ನು ನೀನು ಪತಿಯ ಮುಖವನ್ನು ಕಾಣಲಾರೆ-ನಾನವನನ್ನು ಸಂಹರಿಸಿ ಬಿಡುವೆನು!

ಶಚಿ:—ಬೇಡ! ಹೀಗೆ ನಿರ್ದಯನಾಗಬೇಡ!

ವೃತ್ರಾಸುರ:—ಏಕೆ ನಿರ್ದಯನಾಗಕೂಡದು? ನಾನಿದುವರೆಗೆ ಯಾರ ಮುಖವನ್ನು ನೋಡಿ ದಾನವರ ಪರಮಶತ್ರುವಾಗಿದ್ದ ಇಂದ್ರನನ್ನು ಸಂಹರಿಸದಿರುವೆನೆಂಬದನ್ನು ನೀನರಿಯೆಯಾ? ಪೌಲೋಮಿ, ನಾನು ಕೇವಲ ನಿನಗಾಗಿ—ನಿನ್ನ ಮುಖವನ್ನು ನೋಡಿ—ಇಂದ್ರನನ್ನು ಕೊಂದಿಲ್ಲವೆಂಬದನ್ನು ಮರೆಯದಿರು. ನೀನು ಅಸುರನಂದಿನಿಯಾಗಿಯೂ ಅಸುರರ ವ್ಯಥೆಯನ್ನು—ಅಸುರರ ಮರ್ಮವೇದನೆಯನ್ನು—ತಿಳಿಯದಿರುವಾಗ ನಾನು ನಿನ್ನ ಮೇಲೆ ಏಕೆ ದಯದೋರಬೇಕು? ಕೈಯಲ್ಲಿ ಸಿಕ್ಕ ದೇವತೆಗಳಿಗೆ ಏಕೆ ಕ್ಷಮೆದೋರಬೇಕು? ದೇವತೆಗಳಿಗೂ ನನಗೂ ಸಂಬಂಧವೇನು? ಅವರು ನನ್ನ ಪರಮಶತ್ರುಗಳು! ನೀನೇ ನನ್ನನ್ನು ಹಚ್ಚಿಕೊಳ್ಳದಿರುವಾಗ ನಾನು ನನ್ನ ಪರಮ ವೈರಿಯಾದ ಇಂದ್ರನನ್ನು ಹಚ್ಚಿಕೊಳ್ಳಲಿಯಾ?

ಶಚಿ:—ಏನಿದ್ದರೂ ನೀನಿವರನ್ನು ವಧಿಸಬೇಡ!

ವೃತ್ರಾಸು:—ಏಕೆ, ಏಕೆ ವಧಿಸಲಾಗದು? ನೀನು ದಾನವರ

ಸರ್ವಸ್ವಳು. ದಾನವಕುಲಸಾಮ್ರಾಟನ ಏಕಮಾತ್ರ ಪುತ್ರಿಯು. ಸಾರ್ವಭೌಮ ಸಿಂಹಾಸನದ ಉತ್ತರಾಧಿಕಾರಿಣಿಯು. ದಾನವರೆಲ್ಲರು ನಿನ್ನ ಮುಖವನ್ನು ನಿರೀಕ್ಷಿಸಿಕೊಂಡಿದ್ದರು. ತಮ್ಮ ಸಾರ್ವಭೌಮಿನಿಯು ದಾನವಕುಲದ ಸಕಲ ವಿಧಗಳಾದ ವಿಪತ್ತುಗಳನ್ನು ಪರಿಹರಿಸುವಳೆಂದು ಬಗೆದಿದ್ದರು. ಸಾರ್ವಭೌಮಿನಿಯು ಸಂತಾನದಿಂದ ತಾವು ಚಿರಸುಖಿಗಳಾಗುವೆವೆಂದು ಆಶಾನ್ವಿತರಾಗಿದ್ದರು; ಆದರೆ ನೀನೇನು ಮಾಡಿದೆ? ಅವರ ಕಡೆಗೆ ಒಮ್ಮೆಯಾದರೂ ಮೋರೆಯನ್ನು ಹೊರಳಿಸಿ ನೋಡಿದೆಯಾ? ಸ್ವ-ಕುಲದ ಆಶೆ-ಆಕಾಂಕ್ಷೆಗಳೇನೆಂಬದನ್ನು ಕ್ಷಣಕಾಲದಮಟ್ಟಿಗಾದರೂ ಮನದಂದೆಯಾ? ಇಲ್ಲ! ನಿನ್ನನ್ನೆ ನೀನು ಮರೆದಿರುವೆ! ಸ್ವಕುಲವನ್ನು ಹೀಯಾಳಿಸುತ್ತಿರುವೆ! ಇಂತಹ ನೀನು ದಾನವರ ವೈರಿಣಿಯಲ್ಲವೆ? ನಾನು ಪ್ರತೀಕಾರವನ್ನು ಮಾಡಿಯೆ ಬಿಡುವೆನು! ನಾನು ನನ್ನ ಚಿರ ಶತ್ರುವೂ, ನಿನ್ನ ಪತಿಯೂ ಆದ ಇಂದ್ರನ ರಕ್ತವನ್ನು ಪಾನಮಾಡುವೆನು! ದಾನವರ ಉನ್ನತಿಯ ಮಾರ್ಗವನ್ನು ನಿಷ್ಕಂಟಕವಾಗಿ ಮಾಡುವೆನು! ಹೇಗಿದ್ದರೂ ನಾನು ಅಸುರನು........ದಾನವನು........ದೈತ್ಯನು........ ರಾಕ್ಷಸನು! (ಹೋಗುವನು.)

ಶಚಿ:—ದಾನವರಾಜನೆ, ಕೊಲ್ಲಬೇಡ! ಇವರನ್ನು ಕೊಲ್ಲಬೇಡ!! ನಾನು ಬರುವೆನು!!! (ವೃತ್ರಾಸುರನನ್ನು ಅನುಸರಿಸಿ ಹೊರಡುವಳು. ತುಸ ಹೊತ್ತಿನ ಮೇಲೆ ಋಷಿಗಳು ಹೊರಗೆ ಬರುವರು. ಇಂದ್ರಾಣಿ ಇಲ್ಲದ್ದನ್ನು ಕಾಣುವರು. ಹುಡುಕುವರು. ಕೊನೆಗೆ ನಮ್ಮ ತರ್ಕವು ನಿಜವಾಯಿತೆಂದು ತಮ್ಮ ತಮ್ಮೊಳಗೆ ಮಾತಾಡಿಕೊಳ್ಳುವರು.)

ದಮನ:—ವೃತ್ರಾಸುರನು ಕೇವಲ ಅಸ್ಥಿಗಳನ್ನು ಒಯ್ಯುವದಕ್ಕೆಂದೇ ಬಂದವನಲ್ಲ............

ಮೇಧಾತಿಥಿ:—ಇಂದ್ರಾಣಿಯೆ ಸ್ವೇಚ್ಛೆಯಿಂದ ಅಸ್ಥಿಗಳನ್ನು ವೃತ್ರಾಸುರನಿಗೆ ಕೊಟ್ಟಿದ್ದಾಳೆ............ಅಸುರಕುಲನಾಶದ ಸುದ್ದಿಯನ್ನು

ಕೇಳ, ಇಂದ್ರಾಣಿಯು ಮಾಡಿದ ವಿಲಾಪವನ್ನು ನೀವು ಕೇಳಲಿಲ್ಲವೆ?

ದಮನ:—ಈಗ ಇಂದ್ರಾಣಿಯು ಎಲ್ಲಿಗೆ ಹೋಗಿರಬೇಕು?

ಮೇಧಾತಿಥಿ:—ಅಸುರನ ಬೆನ್ನು ಹತ್ತಿ ಹೋಗಿದ್ದಾಳೆ!

ಶಂಖ:—ದಾನವನು ದಾನವದುಹಿತೆಯನ್ನು ಅಪಹರಿಸಿಕೊಂಡು ಹೋಗಿದ್ದಾನೆ.

ದಮನ:—ಇಂದ್ರಾಣಿಯು ದಾನವದುಹಿತೆಯಾಗಿದ್ದರೂ ದೇವರಾಜನ ಹೆಂಡತಿಯು. ದೇವಿಯು. ದೇವತೆಗಳ ರಾಜ್ಞಿಯು-ಮಾತೆಯು. ಅಸುರನು ದೇವತೆಗಳ ಮಾತೆಯನ್ನೆತ್ತಿಕೊಂಡೊಯ್ದಿದ್ದಾನೆ! ಪರಸ್ತ್ರೀ ಹರಣದ ಮಹಾ ಪಾತಕವನ್ನಾಚರಿಸಿದ್ದಾನೆ! ವೃತ್ರಾಸುರನ ಪಾಪಕಲಶವು ತುಂಬಿದಂತೆಯೆ ಸರಿ. ಇನ್ನು ಅವನ ಅಳಿಗಾಲಕ್ಕೆ ಹೆಚ್ಚು ಅವಕಾಶವಿಲ್ಲ.

(ನೇಪಥ್ಯದಲ್ಲಿ ಇಂದ್ರನು ಶಚೀ! ಶಚೀ! ಎಂದು ಕೂಗುವನು.)

ಋಷಿಗಳು:—ಇದಾರ ಸ್ವರವು? ಯಾವನು ಇಂದ್ರಾಣಿಯನ್ನು ಕೂಗುತ್ತಿರಬಹುದು?

(ಇಂದ್ರನು ಬರುವನು.)

ಋಷಿಗಳು:—ದೇವರಾಜನಿಗೆ ಸ್ವಾಗತವಿರಲಿ!

ಇಂದ್ರ:—ಶಚಿ ಎಲ್ಲಿ? ಇಂದ್ರಾಣಿ ಎಲ್ಲಿರುವಳು?

ಋಷಿಗಳು:—ಇಲ್ಲಿ ಇಲ್ಲ.

ಇಂದ್ರ:—ಎಲ್ಲಿಗೆ ಹೋಗಿರುವಳು?

ಋಷಿಗಳು:—ವೃತ್ರಾಸುರನು ಅವಳನ್ನು ಅಪಹರಿಸಿಕೊಂಡು ಹೋಗಿದ್ದಾನೆ!

ಇಂದ್ರ:-ದೈತ್ಯನು ಅವಳನ್ನು ಎತ್ತಿಕೊಂಡೊಯ್ದನೆ! ಅಯ್ಯೋ!.... ನನ್ನ ದುಃಸ್ವಪ್ನವು ನಿಜವಾದಂತಾಯಿತು! ನಿನ್ನಿನ ರಾತ್ರಿಯಲ್ಲಿ ನಾನೊಂದು ಕನಸು ಕಂಡೆನು. ಕನಸಿನಲ್ಲಿ ಇಂದ್ರಾಣಿಯು ವ್ಯಾಕುಲಮುಖಿಯಾಗಿ ನಿಂತಿದ್ದಳು ಭಯಕಂಪಿತಳಾಗಿದ್ದಳು, ಒಳಿಯಲ್ಲಿ ವೃತ್ರಾಸುರನಿದ್ದನು.

ದೈತ್ಯನು ಇಂದ್ರಾಣಿಯನ್ನು ಬಲಾತ್ಕಾರದಿಂದ ಎಳೆದನು. ಇಂದ್ರಾಣಿಯು ಆರ್ತನಾದ ಮಾಡಿ ಮೂರ್ಛಿತಳಾಗಿ ಬಿದ್ದಳು. ನಾನು ಕನಸಿನಿಂದೆಚ್ಚತ್ತೆನು. ಬಂಧನಗಳನ್ನು ಬಿಟ್ಟುಕೊಂಡೆನು. ಅಸುರನ ಸೆರೆಮನೆಯಿಂದ ಪಾರಾಗಿ ಇಂದ್ರಾಣಿಯ ರಕ್ಷಣೆಗೋಸುಗ ಧಾವಿಸಿ ಬಂದೆನು; ಆದರೆ ಇಲ್ಲಿ ಇಂದ್ರಾಣಿಯಿಲ್ಲವಲ್ಲ! ದೈತ್ಯನ ಅತ್ಯಾಚಾರದಿಂದ ಅವಳ ರಕ್ಷಣೆಯಾಗುವದೆಂತು? ಯಾರು ಅವಳನ್ನು ಈ ವಿಪತ್ತಿನಿಂದ ಬಿಡುಗಡೆ ಮಾಡುವರು? ನಾನೇ ಹೋಗುವೆನು! ದುಷ್ಟ ದೈತ್ಯನನ್ನು ಸಂಹರಿಸಿ ಇಂದ್ರಾಣಿಯನ್ನು ಕರೆತರುವೆನು!

ಋಷಿಗಳು:—ದೇವರಾಜನೆ, ಶಾಂತನಾಗು.

ಇಂದ್ರ:—ಹೇಗೆ ಶಾಂತನಾಗಲಿ? ದೇವಿಯು ದೈತ್ಯನ ಪೀಡೆಗೊಳಗಾಗಿ ಪೇಚಾಡುತ್ತಿರುವಾಗ ನಾನು ಶಾಂತನಾಗುವದೆಂತು? ದೈತ್ಯರು ದೇವಭೂಮಿಯನ್ನು ಕಸಿದುಕೊಂಡಿದ್ದರು ಸಹಿಸಿದ್ದೆನು. ದೇವಭೂಮಿಯನ್ನು ದೇವತೆಗಳ ರಕ್ತದಿಂದ ನೆನಿಸಿದ್ದರು ಸಹಿಸಿದ್ದೆನು; ಆದರೆ ಅವರು ಇದು ವರೆಗೆ ದೇವಿಯರ ಮೇಲೆ-ನಾರಿಯರ ವಿಷಯದಲ್ಲಿ-ಅತ್ಯಾಚಾರವನ್ನಾಚರಿಸಿರಲಿಲ್ಲ. ಇನ್ನು ನಾನು ಸಹಿಸದಾಗಿರುವೆನು! ಈಗಲೆ ಹೊರಡುವೆನು! ದೈತ್ಯನ ಸಂಹಾರ ಮಾಡುವೆನು! ಎಲ್ಲಿ? ದಧೀಚಿ ಋಷಿಗಳ ಅಸ್ಥಿನಿರ್ಮಿತ ಅಸ್ತ್ರವೆಲ್ಲಿ? ವಜ್ರಾಯುಧವೆಲ್ಲಿ? ವೃತ್ರಾಸುರನ ಮೃತ್ಯುಬಾಣವೆಲ್ಲಿ? ಬೇಗನೆ ದಯಪಾಲಿಸಿರಿ!

(ತ್ವಷ್ಟಾನು ವಜ್ರಾಯುಧವನ್ನು ತಕ್ಕೊಂಡು ಬರುವನು.)

ತ್ವಷ್ಟಾ:--ದೇವರಾಜನೆ, ಇಗೊ, ವಜ್ರಾಯುಧವು ಇಲ್ಲಿದೆ! ತಕ್ಕೊ!

ಇಂದ್ರ:—ಮಹಾತ್ಮನ ಅಸ್ಥಿಯಿಂದ ನಿರ್ಮಿತವಾದ ವಜ್ರಾಯುಧವೆ? ಎಲ್ಲಿ?

ತ್ವಷ್ಟಾ:—(ಮುಂದೆ ಹಿಡಿದು) ಇಲ್ಲಿರುವದು ನೋಡು! ತ್ಯಾಗಿವರ್ಯನ ಶ್ರೇಷ್ಠತಮ ದಾನದ ನಿದರ್ಶಕವಿದು! ಮಹಾತ್ಮನು ಅತ್ಯಾ

ಚಾರದ ದಮನಕ್ಕಾಗಿ ದಯಪಾಲಿಸಿದ ಅಸ್ಥಿಯಿಂದ ತಯಾರಾದ ಅಸ್ತ್ರವಿದು! ನೀನಿದನ್ನು ತಕೊಂಡು ಹೋಗಿ ದುಷ್ಟನಿಗ್ರಹ ಮಾಡು. ಜಯಶಾಲಿಯಾಗಿ ದೇವತೆಗಳನ್ನು ವಿಪನ್ಮುಕ್ತರನ್ನಾಗಿ ಮಾಡಿ ಕೀರ್ತಿಶಾಲಿಯಾಗು.

ಇಂದ್ರ:—(ವಜ್ರಾಯುಧವನ್ನು ತಕೊಂಡು ಸನ್ಮಾನವನ್ನು ತೋರಿ) ವೃತ್ರಾಸುರನೆ, ದೇವತೆಗಳ ಭಾಗ್ಯಾಕಾಶದ ಕಾಳಮೇಘಸ್ವರೂಪನೆ, ಇನ್ನು ನಿನ್ನ ಅವತಾರ ಕಾರ್ಯವು ಮುಗಿಯಿತು! ನಾನಿಂದು ನಿನ್ನನ್ನು ತುಂಡು ತುಂಡಾಗಿ ಕತ್ತರಿಸಿ ಬಿಡುವೆನು! (ಹೋಗುವನು.)

ಋಷಿಗಳು:—ಮಹಾತ್ಮಾ ದಧೀಚಿ ಮಹಾರಾಜಕೀ ಜಯ! ಇಂದ್ರದೇವನಿಗೆ ಜಯವಾಗಲಿ!

(ಅಶ್ವಿನೀಕುಮಾರರು ಪ್ರವೇಶಿಸುವರು.)

ದಸ್ರ:—ಎಲ್ಲಿಯ ಜಯ? ಎಲ್ಲೆಲ್ಲಿಯೂ ಅಪಜಯವೇ ಅಪಜಯ!

ಋಷಿಗಳು:—ಏನಾಯಿತು? ಹೀಗೇಕೆ ಅನ್ನುತ್ತಿರುವೆ?

ದಸ್ರ:—ಸೂರ್ಯೆಯೆಲ್ಲಿ?

ನಾಸತ್ಯ:—ಅಸುರನು ಮತ್ತೆ ಅವಳನ್ನು ಎತ್ತಿಕೊಂಡು ಹೋಗಿದ್ದಾನೆ!

ಋಷಿಗಳು:—ನಿಮಗೆ ಈ ಸುದ್ದಿಯನ್ನು ಹೇಳಿದವರಾರು?

ತ್ವಷ್ಟಾ:—ಸೂರ್ಯೆ, ಸೂರ್ಯೆ, ನೀನೆಲ್ಲಿರುವೆ? (ಹುಡುಕ ಹತ್ತುವನು)

ದಸ್ರ:—ಇಲ್ಲ. ಅವಳು ಇಲ್ಲಿ ಇಲ್ಲ! ನಾವು ಎಲ್ಲ ಕಡೆಗೂ ಹುಡುಕಿದೆವು! ಎಲ್ಲಿಯೂ ಸಿಗಲಿಲ್ಲ! ಇನ್ನು ಅವಳು ನಮಗೆ ದೊರೆವುದು ಹೇಗೆ?

ತ್ವಷ್ಟಾ:—ಸೂರ್ಯೆ, ನೀನೆಲ್ಲಿಗೆ ಹೋಗಿರುವೆ?

(ನೇಪಥ್ಯದಲ್ಲಿ ನಾನು ಇಲ್ಲಿರುವೆನು. ಬಂದೆನು, ಎಂಬ ಧ್ವನಿಯಾಗುವದು. ಎಲ್ಲರೂ ವಿಸ್ಮಯದಿಂದ ನೋಡುವರು. ರಕ್ತರಂಜಿತ ದೇಹನಾದ ಬಲಾಸುರನು ಸೂರ್ಯೆಯನ್ನು ಹೊತ್ತುಕೊಂಡು ಬರುವನು. ಕೆಳಗಿಳಿಸುವನು. ಅವಸನ್ನ ದೇಹನಾದ

ಅವನು ಬೀಳುವನು. ಮತ್ತೆ ಏಳುವನು. ಅಶ್ವಿನೀಕುಮಾರರು ಆನಂದದಿಂದ ಸೂರ್ಯೆಯ ಕಡೆಗೆ ಧಾವಿಸುವರು.)

ಬಲಾಸುರ:—ಬೆಳಕಿನ ಮಗಳೆ, ಹೊಳಪಿನ ಹೆಂಗುಸೆ, ನಾನು ಮೊದಲು ಹೇಳಿದಂತೆ ನಿನ್ನನ್ನು ಪಾರುಮಾಡಿದೆನಷ್ಟೆ? ಇನ್ನು ನಾನು ನಿಶ್ಚಿಂತನಾದೆನು. ಕೃತಕೃತ್ಯನಾದೆನು ....ಅಣ್ಣನು ನಿನ್ನನ್ನೆತ್ತಿಕೊಂಡು ಬರಲಿಕ್ಕೆ ಅಪ್ಪಣೆ ಮಾಡಿದನಲ್ಲ? ಆದರೆ ಆ ಅಸುರ ಸೈನಿಕರು ಸುಳ್ಳು ಹೇಳಿ ನನ್ನನ್ನು ವಂಚಿಸಿದರು. ನನ್ನ ಇಚ್ಛೆಯು ವಿರುದ್ಧವಾಗಿ ನಿನ್ನನ್ನು ಹೊತ್ತುಕೊಂಡು ಹೋದರು. ನಾನವರಿಬ್ಬರನ್ನೂ ಸಂಹರಿಸಿದೆನು. ದುಷ್ಟರಿಗೆ ತಕ್ಕ ಶಿಕ್ಷೆಯನ್ನು ವಿಧಿಸಿ, ನಿನ್ನನ್ನು ಬಿಡಗಡೆ ಮಾಡಿ ತಂದೆನು. ಇನ್ನು ನಾನು ಮಾತಾಡಲಾರದವನಾಗಿರುವೆನು. ದೇಹವು ತೀರ ದುರ್ಬಲವಾಗಿ ಹೋಗಿದೆ. ನನ್ನ ಜಯುಷ್ಯವು ಮುಗಿಯುತ್ತ ಬಂದಿದೆ.... (ಬೀಳುವನು. ಸೂರ್ಯೆಯು ಅವನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಕುಳಿತು ಉಪಚರಿಸುವಳು.)

ಸೂರ್ಯೆ:—ಹೀಗೇಕೆ ಮಾಡುತ್ತಿರುವನು? ಇನ್ನು ಇವನು ಬದುಕುವಂತೆ ಕಾಣುವದಿಲ್ಲ! (ಹತ್ತಿರುವ ಅಶ್ವಿನೀಕುಮಾರರನ್ನು ನೋಡಿ) ಹೇಗಾದರೂ ಮಾಡಿ, ನೀವು ಇವನನ್ನು ಬದುಕಿಸಿರಿ. ಇವನು ನನಗಾಗಿ ಸಾಯುತ್ತಿರುವನು! ನಾನಿದನ್ನು ನೋಡಲಾರೆನು!

ಬಲಾಸುರ:—(ಮುಚ್ಚಿದ್ದ ಕಣ್ಣುಗಳನ್ನು ತೆರೆದು) ಬೆಳಕಿನ ಮಗಳೆ, ಹೊಳಪಿನ ಹೆಂಗುಸೆ, ಇನ್ನು ನಾನು ಬದುಕಲಾರೆನು. ನನ್ನ ಆಯುಷ್ಯವು ತೀರಿಹೋಗಿದೆ. ನಾನು ಸಾಯುತಕ್ಕವನೆ! ಇದಕ್ಕಾಗಿ ನನಗೆ ದುಃಖವಿಲ್ಲ. ನಿನ್ನ ತೊಡೆಯ ಮೇಲೆ ಮಸ್ತಕವನ್ನಿಟ್ಟು ಮಡಿಯುವದು ಮಹದ್ಭಾಗ್ಯದ ಸಂಗತಿಯು! ಈ ಭಾಗ್ಯವು ನನಗೆ ದೊರೆತುದಕ್ಕಾಗಿ ನಾನು ಮರಣಕ್ಕೆ ಸಂತೋಷದಿಂದ ಸಿದ್ಧನಾಗಿದ್ದೇನೆ........ (ಏಳುವದಕ್ಕೆ ಪ್ರಯತ್ನಿಸಿ) ಇನ್ನು ಒಂದೇ ಒಂದು ಬಾರಿ ನಿನ್ನ ಮುಖಚಂದ್ರಮನನ್ನು

ನೋಡಿಕೊಳ್ಳುವೆನು ಪರಿತೃಪ್ತನಾಗುವೆನು. (ನೋಡಿ) ಆಹಾ! ಎಂತಹ ಸುಂದರ ಮುಖವಿದು! ಎಂತಹ ಉಜ್ವಲ ವರ್ಣವಿದು! ಆದರೆ ನಾನು? (ತನ್ನ ಕಡೆಗೆ ನೋಡಿಕೊಂಡು ವ್ಯಥಿತನಾಗಿ ಬೀಳುವನು.) ತೀರ ಕಪ್ಪು ಬಣ್ಣ! ಏನು ಮಾಡಿದರೂ ಬಿಳಿದಾಗಲಿಲ್ಲ! ನಿನಗಾಗಿ ನಾನು ಎಷ್ಟೊ ರಕ್ತವನ್ನು ಬಡೆದುಕೊಂಡೆನು ಆದರೂ ಅದು ಕಪ್ಪಾಗಿಯೆ ಉಳಿದಿದೆ! ಉಪಾಯವಿಲ್ಲ! ಸುಂದರಿ, ಈಗಲೂ ನೀನು ನನ್ನನ್ನು ತಿರಸ್ಕರಿಸುವೆಯಾ?

ಸೂರ್ಯೆ:—ನಿನ್ನನ್ನು ತಿರಸ್ಕರಿಸದೆ? ಸಾಧ್ಯವಿಲ್ಲ! ಇಷ್ಟೇ ಅಲ್ಲ; ನೀನು ನನಗೆ ಪರಮ ಪೂಜ್ಯನು! ನೀನು ತಂದೆಯಂತೆ ನನ್ನನ್ನು ರಕ್ಷಿಸಿರುವೆ! ಸಹೋದರನಂತೆ ಪ್ರೀತಿಸಿರುವೆ! ದೇವಸ್ವಭಾವದ ನೀನು ಅಸಹಾಯ ಅಬಲೆಯ ಪ್ರಾಣರಕ್ಷಣೆಗಾಗಿ ಸ್ವಂತದ ಜೀವದಾನ ಮಾಡಿರುವೆ! ನೀನು ಅಸುರನಲ್ಲ-ದೇವನು-ದೇವರ ದೇವನು!

ಬಲಾಸುರ:—ನಾನು ದೇವರ ದೇವನಲ್ಲ....ದೇವನೂ ಅಲ್ಲ.... ಅಸುರನು! ಆದರೆ ಅಂಥಿಂಥ ಅಸುರನಲ್ಲ! ದೇವಿಯನ್ನು ಪ್ರೀತಿಸಿದ ಹಾಗು ದೇವಿಯ ಪ್ರೀತಿಯನ್ನಾಶಿಸಿದ ದಾನವನು! ನನ್ನ ಇಚ್ಛೆಯು ಪೂರ್ಣವಾಯಿತು. ಕೊನೆಯಲ್ಲಿ ನೀನು ನನ್ನನ್ನು ಸ್ನೇಹದೃಷ್ಟಿಯಿಂದ ನೋಡಿದೆ. ಇನ್ನು ನನಗೆ ಏನೂ ಬೇಕಿಲ್ಲ! ಸಂತೋಷದಿಂದ ಸಾ—ಯು—ವೆ—ನು. (ಮರಣ ಹೊಂದುವನು.)

(ಸೂರ್ಯೆಯು ಕಣ್ಣುಗಳನ್ನೊರಿಸಿಕೊಳ್ಳುವಳು. ಉಳಿದವರೆಲ್ಲರೂ ಪ್ರತಿಮೆಗಳಂತೆ ಸ್ತಬ್ಧರಾಗಿ ನಿಂತಿರುವರು.)



# ಪಂಚಮಾಂಕ.



(ರಾತ್ರಿಯ ಸಮಯ. ವೃತ್ರಾಸುರನ ವಿಲಾಸಭವನ. ವೃತ್ರಾಸುರನು ಮಲಗಿರುವನು. ಭಯಂಕರ ದುಃಸ್ವಪ್ನವನ್ನು ಕಂಡು ಜಾಗೃತನಾಗುವನು. ಅತ್ತಿತ್ತ ನೋಡುವನು. ಸೇವಕನನ್ನು ಕೂಗುವನು. ಪಿತ್ರು ಎಂಬ ಪ್ರಧಾನ ಸೇವಕನು ಬರುವನು)

ವೃತ್ರಾಸುರ:— ಹೊರಗಿನ ಕೋಣೆಯಲ್ಲಿ ದಧೀಚಿಯ ಅಸ್ಥಿಗಳ ಗಂಟನ್ನು ಇರಿಸಿದ್ದೆನು. ಸುರಕ್ಷಿತವಾಗಿದೆಯೊ ಇಲ್ಲವೊ ಪರೀಕ್ಷಿಸಬೇಕಾಗಿದೆ ತಕ್ಕೊಂಡು ಬಾ.

ಪಿತ್ರು:—ಮಹಾರಾಜರ ಅಪ್ಪಣೆಯಂತೆ ವರ್ತಿಸುವೆನು.

(ಹೋಗುವನು.)

ವೃತ್ರಾಸುರ:—ನನಗೆ ಹೀಗೆ ದುಃಸ್ವಪ್ನಗಳು ಏಕೆ ಬೀಳುತ್ತಿರಬಹುದು? ಏನು ಮಾಡಿದರೂ ಗಾಢನಿದ್ರೆಯಿಲ್ಲದಾಗಿದೆ! ಶರೀರದ ಹುರುಪು ಅಳಿಯುತ್ತ ನಡೆದಿದೆ! ಏನು ಮಾಡಲಿ? ಯಾವ ಉಪಾಯವನ್ನು ಅವಲಂಬಿಸಲಿ? (ಗೋಣಿಸುವನು. ಪಿತ್ರು ಗಂಟು ತಂದು ಕೊಡುವನು. ವೃತ್ರಾಸುರನು ಬಿಚ್ಚಿ ನೋಡಿಕೊಳ್ಳುವನು. ಯಥಾಸ್ಥಿತವಾಗಿದ್ದುದನ್ನು ಕಂಡು ಸಮಾಧಾನ ಹೊಂದುವನು, ಮತ್ತೆ ಗಂಟು ಕಟ್ಟಿ ಪಿತ್ರುವಿನ ಕೈಯಲ್ಲಿ ಕೊಡುವನು. ತೆಗೆದಿರಿಸಿ ಬಾ, ಎಂದು ಹೇಳುವನು. ಪಿತ್ರು ಮತ್ತೆ ಹೋಗುವನು.) ಇಂದ್ರನು ನನ್ನ ಸೆರೆಯಿಂದ ಪಾರಾಗಿ ಹೋದನಲ್ಲವೆ? ಹೋಗಲಿ! ಅವನಿಂದ ನನಗಾಗುವದೇನು? ಆ ಕೈಲಾಗದವನು ನನಗೇನು ಮಾಡುವನು? ಇಂದ್ರನ ಬದಲು ಇಂದ್ರಾಣಿಯು ನನ್ನ ಕೈವಶಳಾಗಿದ್ದಾಳೆ. ನಾನವಳನ್ನು ನನ್ನ ಈ ಅರಮನೆಗೆ ಕರೆತಂದು ಸತ್ಕರಿಸಿರುವೆನು. ಇನ್ನು ಅವಳಿಗೆ ಅಸುರರ ಐಶ್ವರ್ಯವನ್ನು ತೋರಿಸಬೇಕು. ಮಹತ್ವವನ್ನೂ ಶೌರ್ಯ

ವನ್ನೂ ತಿಳುಹಿಕೊಡಬೇಕು. ಅವಳು ಮೋಹಗೊಳ್ಳುವಂತೆ ಮಾಡ ಲಿಕ್ಕೆ ಬೇಕು. (ಪಿಪ್ರು ಬರುವನು) ಈಗ ಪೌಲೋಮಿಯು ಎಲ್ಲಿರುವಳು?

ಪಿಪ್ರು:—ಸಾಮ್ರಾಜ್ಞಿಯವರ ಬಳಿಯಲ್ಲಿ ಮಲಗಿರುವಳು.

ವೃತ್ರಾಸುರ:—ನನ್ನ ವಿಷಯದಲ್ಲಿ ಅವಳ ಅಭಿಪ್ರಾಯವೇನಿದೆ ಯೆಂಬದನ್ನು ತಿಳಿದುಕೊಂಡಿರುವೆಯಾ?

ಪಿಪ್ರು:—ಮಹಾರಾಜರೆ, ಅವಳು ಅತಿ ಗರ್ವಿಷ್ಠೆಯು. ಕೇವಲ ನಿಮ್ಮೊಬ್ಬರನ್ನೆ ಏಕೆ, ಧಾನವ ಜನಾಂಗವನ್ನೆ ತಿರಸ್ಕರಿಸುತ್ತಿರುವಳು.

ವೃತ್ರಾಸುರ:—ಯಾವ ಮೇಲಿಂದ ನೀನು ಹೀಗೆ ಹೇಳುತ್ತಿರುವೆ?

ಪಿಪ್ರು:—ಅವಳ ಮಾತು-ಕತೆಗಳಿಂದ. ನಾನವಳಿಗೆ ಇಂದ್ರನು ಸೆರೆಮನೆಯಿಂದ ಪಾರಾಗಿ ಹೋದ ಸುದ್ದಿಯನ್ನು ತಿಳುಹಿದೆನು. ಅವಳು ಆನಂದಿತಳಾಗಿ 'ಇನ್ನು ಭಯವಿಲ್ಲದಾಯಿತು, ನಾನು ನಿಶ್ಚಿಂತಳಾದೆನು,' ಎಂದು ನುಡಿದಳು.

ವೃತ್ರಾಸುರ:—ಅವಳು ಆಗಲೆ ಪತಿಯನ್ನು ಹುಡುಕಿಕೊಂಡು ಹೋಗತಕ್ಕವಳು. ಏಕೆ ಹೋಗಲಿಲ್ಲವೆನ್ನಬೇಕು?

ಪಿಪ್ರು:—ಮಹಾರಾಜರೆ, ಅವಳು ನಾಳಿನ ಮುಂಜಾವಿನಲ್ಲಿ ಮತ್ತೊಮ್ಮೆ ನಿಮ್ಮನ್ನು ಕಾಣಬೇಕೆಂದಿರುವಳು. ನಿಮ್ಮೊಡನೆ ಮಾತಾಡ ಬೇಕೆಂದಿರುವಳು ಬಳಿಕ ಪತಿಯ ಸನ್ನಿಧಾನಕ್ಕೆ ಪ್ರಯಾಣಮಾಡುವಳಂತೆ.

ವೃತ್ರಾಸುರ:—ಬೆಳಗಾಗಲಿಕ್ಕೆ ಇನ್ನು ಎಷ್ಟು ಅವಕಾಶವಿದೆ?

ಪಿಪ್ರು:—ಇನ್ನು ಬಹಳ ಕಾಲವಿಲ್ಲ. ಮಧ್ಯರಾತ್ರಿಯು ಮೀರಿ ಹೋಗಿ ಬಹಳ ಹೊತ್ತಾಗಿರಬಹುದು.

ವೃತ್ರಾಸುರ:—ಇಂದಿನ ರಾತ್ರಿಯಲ್ಲಿ ನನಗೆ ನಿದ್ರೆಯು ಇಲ್ಲದಾ ಗಿದೆ! ಕಣ್ಣು ಮುಚ್ಚುತ್ತಲೆ, ಭಯಂಕರವಾದ ಕನಸು ಕಾಣಿಸಿಕೊಳ್ಳು ವದು. ನಾನು ಚೀತ್ಕಾರ ಮಾಡಿ ಎದ್ದು ಬಿಡುವೆನು. ಸ್ವಪ್ನವನ್ನು ನೆನೆದು ವಿಚಾರಿಸುವೆನು. ಹಲವು ವಿಧಗಳಾದ ವಿಚಾರಗಳು ಬರುವವು,

ಮನಸ್ಸು ಭಯಗೊಳ್ಳುವದು. ಕೆಲಹೊತ್ತಿನ ಮೇಲೆ ಮತ್ತೆ ಮನಸ್ಸನ್ನು ಸಮಾಧಾನಪಡಿಸಿಕೊಂಡು ಕಣ್ಣು ಮುಚ್ಚುವೆನು. ಮತ್ತೆ ದುಃಸ್ವಪ್ನವನ್ನು ಕಾಣುವೆನು. ಏಳುವೆನು. ಹೀಗೇಕಾಗುತ್ತಿರಬಹುದೆಂಬದು ಹೊಳೆಯುದಾಗಿದೆ! ಇರಲಿ. ನಾನು ನಿರ್ಭಯನಾಗಬೇಕಾದರೆ, ನೀನು ನಾಳಿನ ಮುಂಜಾವಿನಲ್ಲಿಯೇ ಇಂದ್ರನನ್ನು ಮತ್ತೆ ಸೆರೆಹಿಡಿದು ತರಲಿಕ್ಕೆ ಬೇಕು. ಈ ಸಾರೆ ನಾನು ಅವನಿಗೆ ದಯೆದೋರುವದಿಲ್ಲ. ಕೂಡಲೆ ಅವನನ್ನು ಸಂಹರಿಸಿ ಬಿಡುವೆನು. ಅವನ ಮರಣವನ್ನು ನೋಡಿ ಸಮಾಧಾನ ಹೊಂದಿದ ಒಳಿಕ ಶಚಿಯನ್ನು ಮಾತಾಡಿಸುವೆನು. ಅವಳ ಗರ್ವವನ್ನು ಪರೀಕ್ಷಿಸುವೆನು. ಅವಳ ದರ್ಪವು ಅಡಗಿದ ಹೊರತು ನನಗೆ ಶಾಂತಿಯಿಲ್ಲ. ನಿಶ್ಚಿಂತತೆಯಿಲ್ಲ. ನನ್ನ ಕಣ್ಣುಗಳಿಗೆ ನಿದ್ದೆಯಿಲ್ಲ. ಈಗ ನಾನೇನು ಮಾಡಲಿ? ಹೇಗೆ ವೇಳೆಯನ್ನು ಕಳೆಯಲಿ? ಸುರೆಯು ಸಿದ್ಧವಿದೆಯೊ? ಬೇಗನೆ ತಕ್ಕೊಂಡು ಬಾ.

ಪಿಪ್ರು:—ಮಹಾರಾಜರೆ, ಇಂದು ಸುರೆಯೇಕೆ? ಸೋಮರಸವು ಸಿದ್ಧವಿದೆ. ತಂದು ಕೊಡಲೇನು?

ವೃತ್ರಾಸುರ:—ಮೂರ್ಖನೆ, ಅಸುರರು ಸೋಮರಸವನ್ನು ಕುಡಿದದ್ದುಂಟೆ? ಅಸುರರಿಗೆ ಸೋಮರಸವು ನಿಷಿದ್ಧವಾದ್ದು-ಧರ್ಮಬಾಹ್ಯವಾದ್ದು ದೇವತೆಗಳು ಮಾತ್ರ ಸೋಮರಸವನ್ನು ಕುಡಿಯತಕ್ಕವರು.

(ವಿಲಾಸಭವನದಲ್ಲಿ ಪಿಪ್ರುವಿನ ಬಳಿಯಲ್ಲಿ ಸೋಮರಸಪೂರ್ಣವಾದ ಒಂದು ವಿಚಿತ್ರ ಪಾತ್ರೆಯಿತ್ತು. ಈ ಪಾತ್ರೆಗ ಬೆಳ್ಳಿಯ ತಗಡಿನ ಆವರಣವಿತ್ತು.)

ಪಿಪ್ರು:—ಮಹಾರಾಜರೆ, ಹೀಗಿದ್ದರೆ ಈ ಅರಮನೆಯಲ್ಲಿ ಸೋಮರಸದ ಈ ಪಾತ್ರೆಯೇಕೆ? ನಾನಿದನ್ನು ಹೊರಗೆ ಬಿಸಾಟಿ ಬಿಡಲಿಯಾ?

ವೃತ್ರಾಸುರ:—ಬೇಡ. ಒಂದು ವಿಶಿಷ್ಟ ಕಾರಣಕ್ಕಾಗಿ ನಾನಿದನ್ನು ಬುದ್ಧಿಪೂರ್ವಕ ಇರಿಸಿದ್ದೇನೆ. ನಾನು ಈ ಸೋಮರಸದ ಮುಖಾಂತರ ಶಚಿಯು ದೇವಿಯೊ-ದಾನವಿಯೊ ಎಂಬದನ್ನು ಪರೀಕ್ಷಿಸ

ಬೇಕೆಂದಿದ್ದೇನೆ. ಅವಳು ನಿಜವಾಗಿಯೂ ದಾನವಿಯಾಗಿದ್ದರೆ, ಅವಳ ಧಮನಿಗಳಲ್ಲಿ ದಾನವ ರಕ್ತವು ಪ್ರವಹಿಸುತ್ತಿದ್ದರೆ, ಸೋಮರಸವನ್ನೆಂದೂ ಮುಟ್ಟಳು.

ಪಿಪ್ರು:— ಮಹಾರಾಜರು ಒಳ್ಳೇ ಕುಶಲರು. ಉತ್ತಮವಾದ ಹಂಚಿಕೆಯನ್ನು ಹುಡುಕಿಟ್ಟಿರುವರಿ

ವೃತ್ರಾಸುರ:— ಇಗಲಿ. ನಿನ್ನಿನ ದಿವಸ ನನ್ನ ಸೈನಿಕರು ಹಲವರು ದೇವಾಂಗನೆಯರನ್ನು ಸೆರೆಹಿಡಿದು ತಂದಿರುವರಷ್ಟೆ? ಇವರಲ್ಲಿ ನರ್ತಕಿಯರೂ ಇರುವರು. ನಾನೀಗ ದೇವತಾಸ್ತ್ರೀಯರ ನರ್ತನವನ್ನು ನೋಡ ಬಯಸಿದ್ದೇನೆ. ನೀನು ಹೋಗು. ನರ್ತಕಿಯರನ್ನು ಬರಮಾಡು. ಸುರೆಯನ್ನೂ ತಕೊಂಡು ಬಾ. (ಪಿಪ್ರು ಹೋಗುವನು ನರ್ತಕಿಯರು ಬರುವರು. ಪಿಪ್ರು ಸುರೆಯನ್ನು ತಂದು ಕೊಡುವನು. ನಾಚು ಆರಂಭವಾಗುವದು. ವೃತ್ರಾಸುರನು ಸುರೆಯನ್ನು ಸೇವಿಸುತ್ತ ನರ್ತನವನ್ನು ನೋಡುವನು. ಕ್ಷಣಕಾಲದಲ್ಲಿ ಕಣ್ಣು ಮುಚ್ಚುವನು. ನರ್ತಕಿಯರು ಅಸುರ ರಾಜನಿಗೆ ನಿದ್ದೆ ಹತ್ತಿತೆಂದು ತಿಳಿದು ಹೊರಟು ಹೋಗುವರು. ಪಿಪ್ರು ಹೊರಗೆ ಬಂದು ಬಾಗಿಲ ಕಾಯುತ್ತ ಕುಳ್ಳಿರುವನು.)

ಪಿಪ್ರು:— ರಾಜಸೇವೆಯು ಬಹು ಕಠಿಣವಾದದ್ದು. ಹಲವು ಕುವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡಿದ್ದ ರಾಜರಿಗೆ ರಾತ್ರಿಯಲ್ಲಿ ನಿದ್ದೆ ಹತ್ತದಿರುವದು ಸ್ವಾಭಾವಿಕವಾದದ್ದು; ಆದರೆ ನನ್ನ ಗತಿಯೇನು? ರಾಜನು ಕರೆದಾಗ ಕೈ ಕಟ್ಟಿಕೊಂಡು ಹೋಗಿ ನಿಲ್ಲಬೇಕಾದ ನನಗೆ ನಿದ್ರೆಗೆ ಅವಕಾಶವೆಲ್ಲಿ?

ವೃತ್ರಾಸುರ:— (ಭಯಂಕರವಾದ ಸಪ್ಪಳವನ್ನು ಕೇಳಿ ಗಡಬಡಿಸಿ ಏಳುವನು. ಗಾಬರಿಯಾಗಿ ಅತ್ತಿತ್ತ ನೋಡುವನು.) ಪಿಪ್ರು ಎಲ್ಲಿರುವೆ? ಭಯಂಕರ ಸಪ್ಪಳವಾಗಲಿಲ್ಲವೆ? ಏತರ ಧ್ವನಿಯದು?

ಪಿಪ್ರು:—(ಒಳಗೆ ಹೋಗಿ) ಮಹಾರಾಜರೆ, ಹೊರಗೆ ಬಿರುಗಾಳಿ

ಬೀಸುತ್ತಿದೆ. ಭಯಂಕರ ಬಿರುಗಾಳಿ! ನೀವು ಕೇಳಿದ್ದುದು ಬಿರುಗಾಳಿಯ ಸಪ್ಪಳವಾಗಿರಬೇಕು!

ವೃತ್ರಾಸುರ:—ನೀನು ಕೇಳಲಿಲ್ಲವೆ?

ಪಿಪ್ರು:—ನನಗೆ ಕೊಂಚ ನಿದ್ದೆ ಹತ್ತುವದರಲ್ಲಿತ್ತು ಯಾವ ಸಪ್ಪಳವನ್ನೂ ನಾನು ಕೇಳಲಿಲ್ಲ.

ವೃತ್ರಾಸುರ:— ಆಶ್ಚರ್ಯವೆ ಸರಿ! ನಿದ್ದೆಯಲ್ಲಿ ಮೈಮರೆದಿದ್ದ ನಾನು ಆ ಸಪ್ಪಳದಿಂದ ಜಾಗ್ರತನಾಗಿರಲು ನೀನು ಆ ಸಪ್ಪಳವನ್ನೇ ಕೇಳಲಿಲ್ಲವೆಂದು ಅನ್ನುತ್ತಿರುವೆ! ಆಗಲಿ. ನಾನು ಹೋಗಿ ಪರೀಕ್ಷಿಸುವೆನು. (ಎದ್ದು ಹೋಗುವನು. ಬಾಹ್ಯಪ್ರಕೃತಿಯನ್ನು ನೋಡಿ ತಿರುಗಿಬರುವನು) ಆಕಾಶವು ಕಾರ್ಮೋಡದಿಂದ ಮುಚ್ಚಿ ಹೋಗಿದೆ ಬಿರುಗಾಳಿಯು ಭರದಿಂದ ಬೀಸುತ್ತಿದೆ. ಪ್ರಕೃತಿಯು ನನ್ನ ಹೃದಯದಂತೆ ವಿಕಲ್ಪವಾಗಿ ಹೋಗಿದೆ! (ಹಾಸುಗೆಯ ಮೇಲೆ ಒರಗಿಕೊಳ್ಳುವನು. ಕಣ್ಣು ಮುಚ್ಚುವನು. ಪಿಪ್ರು ಬಾಗಿಲವನ್ನು ಮುಂದೆ ಮಾಡಿಕೊಂಡು ಹೊರಗೆ ಕುಳ್ಳಿರುವನು.)

ಪಿಪ್ರು:—ದೊರೆಗಳವರ ದಿವ್ಯಚಿತ್ತ ಯಾವ ಕಾಲಕ್ಕೆ ಯಾವ ಇಚ್ಛೆಯನ್ನು ಹೊಂದೀತು? ಯಾವ ನೋಟವನ್ನು ಕಂಡೀತು? ಎಂಬುದರ ನಿಯಮವಿಲ್ಲ!

ವೃತ್ರಾಸುರ:—(ಅರೆನಿದ್ದೆಯಲ್ಲಿ ಬಡಬಡಿಸಹತ್ತುವನು.) ಇವನಾರು? ಆ ಬಾಗಿಲ ಬಳಿಯಲ್ಲಿ ನಿಂತು ನನ್ನ ಕಡೆಗೆ ನೋಡುತ್ತಿರುವವನಾವನು? ದಧೀಚಿ ಋಷಿಯು! ಇಲ್ಲಿ ಹೇಗೆ ಬಂದಿರಬಹುದು? ಏಕೆ ಬಂದಿರಬಹುದು? ಕೈಗಳಲ್ಲಿ ಕಬ್ಬಿಣದ ಮೊಳೆಗಳಿವೆ! ರಕ್ತವು ಹೊರಹೊರಡುತ್ತಿದೆ. ಪುಟಿಯುತ್ತಿದೆ. ಆದರೂ ಋಷಿಯ ಮುಖದಲ್ಲಿ ಕಾತರತೆಯಿಲ್ಲ. ಆರ್ತನಾದವಿಲ್ಲ. ಕೆಂಗಣ್ಣಿನಿಂದ ನನ್ನನ್ನು ನೋಡುತ್ತಿರುವನು ಮಾತ್ರ. ಒಳ್ಳೆ ಗಟ್ಟಿಗನು! ಪರಮ ಸಹಿಷ್ಣುವು! ಆದರೆ ನಾನೀ ನೋಟವನ್ನು ನೋಡಲಾರೆನು! ಈಗಳೆ ಈ ಋಷಿಯನ್ನು ಹೊರದೂಡಿಸಲಿಕ್ಕೆ ಬೇಕು ಬಲಾ

ಸುರ, ಬಲಾಸುರ, ನೀನೆಲ್ಲಿರುವೆ? ಬೇಗ ಬಾ; ಈ ಋಷಿಯನ್ನು ಬಂಧು ಹಿಡಿದು ದಬ್ಬಿಕೊಡು!...........ಬಲಾಸುರ, ಏಕೆ ಬರಲೊಲ್ಲೆ? ಈ ಋಷಿಗೆ ಭಯಗೊಂಡು ಅಣ್ಣನ ಆಜ್ಞಾಭಂಗ ಮಾಡಬೇಕೆಂದಿರುವಿಯಾ? ನೀನು ವಿಧೇಯನಾದರೆ, ನಾನು ನಿನ್ನನ್ನು ಕ್ಷಮಿಸೆನು!.............. ಬಲಾಸುರನು ಬರಲಿಲ್ಲವಲ್ಲ! ನಾನೇ ಈ ಋಷಿಯನ್ನು ಹೊರದಳ್ಳುವೆನು. (ಏಳುವನು. ಅತ್ತಿತ್ತ ನೋಡುವನು. ಋಷಿಯು ಕಾಣದಿರುವದನ್ನು ಕಂಡು ಮತ್ತೆ ಒರಗಿ ಕೊಳ್ಳುವನು. ಕಣ್ಣು ಮುಚ್ಚುವನು. ಕ್ಷಣಕಾಲದ ತರುವಾಯ) ಇದೇನು? ನನ್ನ ಈ ವಿಲಾಸಭವನದಲ್ಲಿ ನಡುಯೊಳ್ಳಿಂದ ಬಂತು? ದಂಡೆಯಲೊಂದು ಗಿಡವಿದೆ. ಬೊಡ್ಡೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕುಳಿತಿರುವ ಇವನಾವನು? ದಧೀಚಿ ಋಷಿಯು! ದೇವತೆಗಳ ಹಿತಕ್ಕಾಗಿ ಆತ್ಮಯಜ್ಞವನ್ನು ಮಾಡು ತ್ತಿದ್ದಾನೆ! ದಾನವರನ್ನು ಆಹುತಿಗೊಳ್ಳುವ ಅಗ್ನಿಯನ್ನು ಹೊತ್ತಿಸುತ್ತಿ ದ್ದಾನೆ! ನಾನೇನು ಮಾಡಲಿ? ಮರಣಕ್ಕೆ ಸಿದ್ಧನಾಗಿ ಮೃತ್ಯುದೇವತೆಯ ಸ್ವರೂಪದಲ್ಲಿದ್ದ ಗಿಡವನ್ನು ತೆಕ್ಕೆ ಹಾಯ್ದಿದ್ದ ಇವನಿಗೆ ನಾನಾವ ಬೆದರಿಕೆ ಯನ್ನು ತೋರಲಿ? ಈ ಋಷಿಯನ್ನು ದುಸ್ಸಾಹಸದಿಂದ ತಡೆವುದು ನನಗೆ ಸಾಧ್ಯವಿಲ್ಲ. ಅಗೊ, ಋಷಿಯು ತನ್ನ ಮರಣಸಮಯದಲ್ಲೂ ನನ್ನನ್ನು ನೋಡಿ ಪರಿಹಾಸ ಮಾಡುತ್ತಿರುವನು. ನಾನವನ ಪರಿಹಾಸ ವನ್ನು ಹೇಗೆ ಸಹಿಸಿಕೊಳ್ಳಲಿ? ದಾನವ ಸಾಮ್ರಾಟನಾದ ನಾನು ಯಃಕ ಶ್ಚಿತ ಋಷಿಯಿಂದಾಗುತ್ತಿರುವ ಅಪಮಾನವನ್ನು ಸುಮ್ಮನಿದ್ದು ಸಹಿಸಿ ಕೊಳ್ಳುವದು ನಾಚಿಕೆಗೇಡಿತನವಲ್ಲವೆ? ಅಹುದು! ಆದರೆ ಮಾಡಬೇ ಕೇನು? ಉಪಾಯವೇನೂ ಇಲ್ಲವೇ ಇಲ್ಲ! ಅಯ್ಯೋ, ಎಂತಹ ಮರ್ಮ ಯಾತನೆಯಿದು!............

(ಚೀತ್ಕರಿಸುವನು ಪಿಪ್ರು ಬಾಗಿಲವನ್ನು ತೆರೆದು ಒಳಗೆ ಬರುವನು.)

ಪಿಪ್ರು:-ಮಹಾರಾಜರೆ, ಏಕೆ ಚೀತ್ಕಾರ ಮಾಡಿದಿರಿ? ಏನಾಯಿತು?

ವೃತ್ರಾಸುರ:—(ಎದ್ದು ಕುಳಿತು ಅತ್ತಿತ್ತ ನೋಡಿ) ಕಾಣದಾಗಿದ್ದಾನೆ.

ಇಷ್ಟರಲ್ಲಿಯೆ ಹೇಗೆ ಮಾಯವಾಗಿ ಹೋಗಿದ್ದಾನಾದೀತು? (ಪಿಪ್ರುವನ್ನು ಕುರಿತು) ಹುಡುಕಿ ನೋಡು. ಹೊರಗೂ ಒಳಗೂ ಚೆನ್ನಾಗಿ ಹುಡುಕಿ ನೋಡು.

ಪಿಪ್ರು:—(ಹುಡುಕುವನು ಯಾರನ್ನೂ ಕಾಣದೆ ತಿರುಗಿ ಬರುವನು.) ಮಹಾರಾಜರೆ, ಯಾರೂ ಇಲ್ಲ. ಹೊರಗೆ ಬಿರುಗಾಳಿಯು ಮಾತ್ರ ಭಯಾನಕ ರೀತಿಯಿಂದ ಬೀಸುತ್ತಿದೆ.

ವೃತ್ರಾಸುರ:—ಕೇವಲ ಹೊರಗೇ ಏಕೆ, ನನ್ನ ಹೃದಯದಲ್ಲೂ ಬೀಸುತ್ತಿರುವುದನ್ನು ನಾನು ಬಲ್ಲೆನು! ಆದರೆ ದಧೀಚಿಯೆಲ್ಲಿ? ನಾನವ ನನ್ನು ಎರಡು ಸಲ ಕಂಡೆನು.

ಪಿಪ್ರು:—ಮಹಾರಾಜರೆ, ತಾವು ಸ್ವಪ್ನವನ್ನು ಕಂಡಿರಬೇಕು. ದೇಹವಿರಿಸಿದ್ದ ದಧೀಚಿಯು ಹೇಗೆ ಈ ಕೋಣೆಯಲ್ಲಿ ಬಂದಾನು?

ವೃತ್ರಾಸುರ:—ಸ್ವಪ್ನವಲ್ಲ! ನಿಜವಾಗಿಯೂ ನಾನವನನ್ನು ಕಂಡೆನು! ಅಘಟಿತಘಟನೆಗಳನ್ನು ಘಟಿಸಬಲ್ಲ ಪರಮ ದುಸ್ಸಾಹಸಿಗ ನವನು! ಅವನಿಗೆ ಅಸಾಧ್ಯವಾದ್ದಾವುದೂ ಇಲ್ಲ! ಅವನ ಅಸ್ಥಿಗಳು ಇದ್ದ ಸ್ಥಳದಲ್ಲಿ ಇವೆಯೆ ಹೇಗೆ ನೋಡು. ತಕ್ಕೊಂಡು ಬಾ. ಕಣ್ಣುಟ್ಟ ಕಂಡಹೊರತು ನನಗೆ ಸಮಾಧಾನವಿಲ್ಲ (ಪಿಪ್ರು ಹೋಗುವನು. ಗಂಟು ತಂದು ಕೊಡುವನು. ವೃತ್ರಾಸುರನು ನೋಡಿಕೊಂಡು ಮತ್ತೆ ಆ ಗಂಟನ್ನು ಪಿಪ್ರುವಿನ ಕೈಯಲ್ಲಿ ಕೊಡುವನು) ಬೆಳಗಾಗುತ್ತಲೆ ಈ ಅಸ್ಥಿಗಳನ್ನು ಕುಟ್ಟಿ ಪುಡಿಮಾಡು. ಬಳಿಕ ಆ ಪುಡಿಯನ್ನು ಬೀಸು. ಉಂಟಾದ ಹಿಟ್ಟನ್ನು ಸಮುದ್ರದಲ್ಲಿ ಚೆಲ್ಲಿ ಕೊಟ್ಟು ಬಾ ತಿಳಿಯಿತೆ?........ಇದರಿಂದ ನಾನು ನಿಶ್ಚಿಂತನಾದೇನೆ? (ಗೇಣಿಸುವನು) ಬೇಡ. ಕುಟ್ಟಿಪುಡಿಮಾಡುವದು ಬೇಡ. ಸಮುದ್ರದಲ್ಲಿ ಬಿಸಾಡುವದೂ ಬೇಡ. ಹೀಗೆ ಮಾಡಿದರೆ, ಹಿಟ್ಟಿನ ಕಣಗಳೆಲ್ಲ ಒಂದೆಡೆ ಯಲ್ಲಿ ಕಲೆತು, ನನ್ನ ನಾಶಕ್ಕೆ ಸಮರ್ಥವಾಗಬಹುದು! (ಆಲೋಚಿಸುವನು) ನಾಳಿನ ಬೆಳಗಿನಲ್ಲಿ ಒಂದು ಆಳವಾದ ತೆಗ್ಗು ತೆಗಿ. ಅದರಲ್ಲಿ ಈ ಅಸ್ಥಿ

ಗಳನ್ನು ಹೂಗಿದು ಬಿಡು. ಜನರಿಗೆ ಹೂಗಿದ ಸ್ಥಳವು ತೊಳೆಯದಂತೆ ವ್ಯವಸ್ಥೆ ಮಾಡು. ಹೀಗೆ ಮಾಡಿದರೆ ನೆಟ್ಟಗಾಗಲಿಕ್ಕಿಲ್ಲವೆ? ನನಗೆ ಈ ಅಸ್ಥಿಗಳ ಉಪಯೋಗವಿಲ್ಲ ನನ್ನ ವೈರಿಗಳಿಗೆ ಇವು ಅತ್ಯವಶ್ಯವಾಗಿ ಬೇಕಿವೆ! ಇವು ವೈರಿಗಳ ಹಸ್ತಗತವಾಗದಂತೆ ನಾನು ಮಾಡಲೇಬೇಕು! ಏನು ಮಾಡಲಿ? ಇವುಗಳನ್ನು ಜಗತ್ತಿನಿಂದ ಹೊರದೂಡುವ ಮತ್ತೆ ಯಾವ ಉಪಾಯವನ್ನವಲಂಬಿಸಲಿ? ಹೇಗೆ ಮಾಡಿದರೆ, ನಾನು ಸಂಪೂರ್ಣ ನಿಶ್ಚಿಂತನಾದೇನು?............

ಪಿಪ್ರು:—ಮಹಾರಾಜರೆ, ವಿಚಾರ ಮಾಡಿ ಮಾಡಿ ನಿಮ್ಮ ತಲೆ ಕೆಟ್ಟು ಹೋಗುವದರಲ್ಲಿದೆ! ನೀವಿನ್ನು ವಿಚಾರ ಮಾಡಬೇಡಿರಿ! ನಾನು ಯಾವದೊಂದು ರೀತಿಯಿಂದ ಈ ಅಸ್ಥಿಗಳು ಶತ್ರುಗಳ ಕೈಸೇರದಂತೆ ಯೋಗ್ಯ ವ್ಯವಸ್ಥೆ ಮಾಡುವೆನು. ನೀವು ಈ ವಿಷಯದಲ್ಲಿ ನಿಶ್ಚಿಂತರಾಗಿ ಕ್ಷಣಕಾಲ ವಿಶ್ರಮಿಸಿರಿ. ನಿದ್ದೆ ಮಾಡಿರಿ.

ವೃತ್ರಾಸುರ:—ನಿದ್ದೆ ಮಾಡಲಿಯಾ? ಹೇಗೆ ಮಾಡಲಿ? ನಾನು ನಿದ್ದೆಯನ್ನು ಹಿಡಿಯ ಹೋದಂತೆ ಅದು ನನ್ನಿಂದ ದೂರ ಸರಿಯುವದರಲ್ಲಿದೆ! ನಾನದನ್ನು ಹೇಗೆ ಹಿಡಿಯಲಿ? ಇಂದಿನ ಈ ಕಾಳರಾತ್ರಿಯು ಎಂತಹ ದೀರ್ಘವಾದದ್ದಾಗಿದೆಯಲ್ಲ! ಬೆಳಗು ಬಂದಿಲ್ಲವೆ?

ಪಿಪ್ರು:—ಮಹಾರಾಜ, ಬೆಳಗಾಗುವದರಲ್ಲಿದೆ; ಆದರೆ ಹೊರಗಿನ ಹವೆಯು ಸರಿಯಾಗಿಲ್ಲ ನೀವು ಇನ್ನೂ ಕೆಲಹೊತ್ತು ವಿಶ್ರಾಂತಿಯನ್ನು ಪಡೆಯುವದು ಹಿತಕರವಾದದ್ದು.

ವೃತ್ರಾಸುರ:—ಬೆಳಗಾಗ ಬಂದಿದಯೆ? ಒಳ್ಳೆ ಆನಂದದ ಸಂಗತಿ. ನನಗೆ ವಿಶ್ರಾಂತಿ ಬೇಡ (ಹಾಸುಗೆಯಿಂದ ಏಳುವನು. ಹೊರಗೆ ಹೋಗಿ ನೋಡಿ ಮತ್ತೆ ಒಳಗೆ ಬರುವನು.) ಪಿಪ್ರು, ಬೆಳಗಾಗಿ ಹೋಗಿದೆ ನಾನು ಇಂದ್ರನ ವಧೆಯ ತರುವಾಯ ಇಂದ್ರಾಣಿಯನ್ನು ಮಾತಾಡಿಸಬೇಕೆಂದಿದ್ದೆನು; ಆದರೆ ಈಗ ಆ ಸಂಕಲ್ಪವನ್ನು ತ್ಯಜಿಸಿದ್ದೇನೆ. ಈಗಲೆ ಇಂದ್ರಾಣಿಯನ್ನು

ಮಾತಾಡಿಸಬೇಕೆಂದಿದ್ದೇನೆ. ಅವಳನ್ನು ಕರೆದುಕೊಂಡು ಬಾ. (ಪಿಪ್ರ ಹೋಗುವನು. ವೃತ್ರಾಸುರನು ಮತ್ತೊಬ್ಬ ಸೇವಕನನ್ನು ಕೂಗುವನು. ಉರಣನು ಬರುವನು.) ನರ್ತಕಿಯರನ್ನು ಕಳುಹಿಕೊಡು. ಉತ್ತಮವಾದ ಸುರೆಯನ್ನು ತಕ್ಕೊಂಡು ಬಾ. (ಉರಣನು ಹೋಗುವನು. ನರ್ತಕಿಯರು ಪ್ರವೇಶಿಸುವರು. ಅಸುರ ನರ್ತಕಿಯರು ಗಾಯನ-ನಾಚುಗಳನ್ನಾರಂಭಿಸ ಮದರಲ್ಲಿದ್ದರು) ದಾನವಸಾಮ್ರಾಟನಾಗಿದ್ದ ಪುಲೋಮನನ ಮಗಳಾದ ಪೌಲೋಮಿಯು ಬಂದಿದ್ದಾಳೆ. ನೀವವಳ ಸ್ವಾಗತ ಮಾಡಬೇಕಾಗಿದೆ ನಿಮ್ಮ ನೃತ್ಯ-ಗೀತಗಳು ಅವಳ ಮನಸ್ಸನ್ನು ಚನ್ನಾಗಿ ಆಕರ್ಷಿಸಬೇಕಾಗಿದೆಯೆಂಬುದನ್ನು ಲಕ್ಷ್ಯದಲ್ಲಿರಿಸಿ ಕಾರ್ಯಪ್ರವೃತ್ತರಾಗಿರಿ ಅವಳು ನಿಜವಾಗಿಯೂ ಅಸುರನಂದಿನಿಯಾಗಿದ್ದರೆ-ದೇವತೆಗಳ ಸಂಪರ್ಕದಿಂದ ಕುಲಗೆಡದಿದ್ದರೆ-ನಿಮ್ಮ ನೃತ್ಯ-ಗೀತಗಳನ್ನು ಪ್ರೀತಿಸಲೇ ಬೇಕು. (ನಾಚು ಆರಂಭವಾಗುವದು. ಉರಣನು ಸುರೆಯನ್ನು ತರುವನು. ವೃತ್ರಾಸುರನು ಸುರಾಪಾನಮಾಡುತ್ತ ನೋಡುತ್ತಿರುವನು. ಶಚಿಯು ಬರುವಳು. ನರ್ತಕಿಯರು ಸ್ವಾಗತ ಪದ್ಯವನ್ನು ಹಾಡಿ ಹೋಗುವರು. ಉರಣನೂ ಹೋಗುವನು ವೃತ್ರಾಸುರನು ಎದ್ದು ಬಂದು) ಅಸುರನಂದಿನಿಗೆ ಸ್ವಾಗತವು. ಸುಸ್ವಾಗತವು. ಹೀಗೆ ಬರಬೇಕು.

ಶಚಿ:—ದೈತ್ಯರಾಜನೆ, ನನಗೆ ಇಷ್ಟೊಂದು ಆದರದ ಅವಶ್ಯಕತೆಯಿಲ್ಲ. ಕರೆಸಿದ ಕಾರಣವೇನು?

ವೃತ್ರಾಸುರ:—ಒಂದು ಮಹತ್ವದ ಸಂಗತಿಯ ಬಗ್ಗೆ ನಿನ್ನೊಡನೆ ಮಾತಾಡಬೇಕಿದೆ.

ಶಚಿ:—ಆಗಲಿ

ವೃತ್ರಾಸುರ:—ನೀನು ನನ್ನ ಹಿತಾಕಾಂಕ್ಷಿಣಿಯೊ? ಅಹಿತವನ್ನು ಆಶಿಸುವವಳೊ?

ಶಚಿ:-ದಾನವರಾಜನೆ, ನಾನು ನಿನ್ನ ಹಿತವನ್ನೆ ಕೋರುತ್ತಿರುವೆನು.

ವೃತ್ರಾಸುರ:—ನಾನೆಂದರೆ ಒಂದು ವ್ಯಕ್ತಿಯೆಂದು ಭಾವಿಸಬೇಡ.

ದಾನವ ಕುಲವೆಂದೇ ತಿಳಿದು ಮಾತಾಡು.

ಶಚಿ:—ನಾನು ದಾನವಕುಲ ಹಿತಾಕಾಂಕ್ಷಿಣಿಯು. ದಾನವರಿಗೆ ಒಳಿತಾಗದೇಕೆಂದೆ ನಾನು ಸದಾ ಬಯಸುತ್ತಿರುವೆನು!

ವೃತ್ರಾಸುರ:—ಇದರರ್ಥವೇನು?

ಶಚಿ:—ಅರ್ಥವು ತೀರ ಸ್ಪಷ್ಟವಾಗಿದೆ. ನಾನು ಹೇಗೇ ಅಪೇಕ್ಷಿಸಲಿ, ಹಿತಾಹಿತಗಳನ್ನು ಸಾಧಿಸಿಕೊಳ್ಳುವದು ಅವರವರ ಕಾರ್ಯಗಳನ್ನವಲಂಬಿಸಿದೆ ಯಾರು ದುರಾಶೆಗೊಳಗಾಗಿ ದುಷ್ಕಾರ್ಯಪ್ರವೃತ್ತರಾಗುವರೋ ಅವರು ಹಾಳಾಗುವರು. ಯಾರು ಸದುದ್ದೇಶಪ್ರೇರಿತರಾಗಿ ಸತ್ಕಾರ್ಯವಮಾಡುವರೋ ಅವರು ಸುಖಿಸುವರು.

ವೃತ್ರಾಸುರ:—ಈಗ ದಾನವರು ಹಿಡಿದಿರುವ ದಾರಿ ಯಾವುದು?

ಶಚಿ:—ದುರ್ಮಾರ್ಗವು!

ವೃತ್ರಾಸುರ:—ಅದೇಕೆ?

ಶಚಿ:—ದಾನವರು ದುರಾಶಾಗ್ರಸ್ತರಾಗಿದ್ದಾರೆ. ಅವರಿಗೆ ತಮ್ಮ ಸ್ವಾಮಿತ್ವದ ಭೂಮಿಯು ಸಾಲದಾಗಿದೆ. ಅನ್ಯರ ಪ್ರದೇಶವನ್ನು ಅನ್ಯಾಯದಿಂದ ಆಕ್ರಮಿಸಲಿಕ್ಕೆ ಮುಂದರಿದಿದ್ದಾರೆ. ದೇವತೆಗಳ ದೇವಭೂಮಿಯನ್ನು ಕಸಿದುಕೊಂಡಿದ್ದಾರೆ. ದೇವತೆಗಳ ಮೇಲೆ ಅತ್ಯಾಚಾರ ಮಾಡುತ್ತಿದ್ದಾರೆ. ಇದು ಸರಿಯಾದ ಮಾರ್ಗವಾದೀತೆ? ಇದರಿಂದ ಸುಖವು ದೊರೆದೀತೆ?

ವೃತ್ರಾಸುರ:—ಏಕೆ ದೊರೆಯಲಾಗದು? ವಸುಂಧರೆಯು ವೀರಭೋಗ್ಯವು. ಮಹತ್ವಾಕಾಂಕ್ಷೆಯು ಮಾನವನ ಸಜೀವತೆಯ ಲಕ್ಷಣವು. ಇದ್ದುದರಲ್ಲಿಯೆ ತೃಪ್ತನಾಗಿರುವ ಕೂಪಮಂಡೂಕವೃತ್ತಿಯು ಹೇಡಿಗೆ ಮಾತ್ರ ಸಮ್ಮತವು. ನಾವು ಹೇಡಿಗಳಲ್ಲ ಶೂರರೂ, ಸಾಹಸಿಗಳೂ ಆಗಿದ್ದ ನಾವು, ಮಹತ್ವಾಕಾಂಕ್ಷೆಯನ್ನು ಧರಿಸಲಾಗದೆ? ಪರಚಕ್ರಗಳ ಮೇಲೆ ದಾಳಿಯನ್ನಿಡಲಾಗದೆ? ಶೌರ್ಯವನ್ನೂ, ಸಾಹಸವನ್ನೂ ಪ್ರಕ

ಟಿಸಿ, ಜಯಶಾಲಿಗಳಾಗಿ ಕೀರ್ತಿವಂದಿತರಾಗುವದು ಅಸುರರಿಗೆ ಭೂಷಣಾಸ್ಪದವಲ್ಲವೆ?

ಶಚಿ:—ಪರಪೀಡೆಯು ಪಾಪದ ಕೆಲಸವಲ್ಲವೆ? ಆತ್ಮಸಂರಕ್ಷಣೆಯ ಅಧಿಕಾರವು ಪ್ರತಿಯೊಬ್ಬನಿಗಿದೆ. ಅಲ್ಲದೆ, ಪರರ ವಸ್ತುವನ್ನು ಅಪಹರಿಸುವ ಹಕ್ಕು ಯಾವನಿಗೂ ಇಲ್ಲ. ಕಾಲು ಕೆದರಿ ಜಗಳ ತೆಗೆಯುವದರಲ್ಲೂ, ಪರಸ್ವಾಪಹರಣ ಮಾಡುವ್ವದರಲ್ಲೂ, ಪ್ರಾಣಹಿಂಸೆಯಲ್ಲೂ ಪುರುಷಾರ್ಥವಿದೆಯೆ? ಈ ಅನೀತಿಯ ಕೃತ್ಯಗಳು ಯಾವ್ವದೊಂದು ಜನಾಂಗಕ್ಕೆ ಗೌರವವನ್ನುಂಟುಮಾಡಬಹುದೆ? ಭೂಷಣಾಸ್ಪದಗಳಾಗಬಹುದೆ? ದಾನವೇಂದ್ರನೆ, ಬೇಡ. ದುರಾಶೆಯಿಂದ ಪರಿಚಾಲಿತನಾಗಿ ದುಷ್ಕೃತ್ಯಗಳಿಗೆ ಮುಂದರಿಯುವದು ಬೇಡ! ದೇವತೆಗಳನ್ನು ಜಯಿಸುವ ಹವ್ಯಾಸವನ್ನು ಬಿಟ್ಟುಕೊಡು. ಅವರ ದೇವಭೂಮಿಯನ್ನು ಅವರ ಸ್ವಾಧೀನಪಡಿಸು. ನಿನ್ನ ಮಹದ್ಗುಣದಿಂದ ದೇವತೆಗಳ ಪ್ರೀತಿಯನ್ನು ಸಂಪಾದಿಸಿ, ದೇವತೆಗಳೊಡನೆ ಒಪ್ಪಂದ ಮಾಡಿಕೊಂಡು, ನಿನ್ನ ರಾಜ್ಯಕ್ಕೆ ಹೊರಟುಹೋಗು. ಸುಖದಿಂದಲೂ ಸಮಾಧಾನದಿಂದಲೂ ಇದ್ದು ಉತ್ತಮರೀತಿಯಿಂದ ರಾಜ್ಯಕಾರಭಾರವನ್ನು ಸಾಗಿಸು. ಸ್ವಜನಾಂಗದ ಪ್ರೀತಿಗ ಪಾತ್ರನಾಗಿ ಪ್ರಜೆಗಳ ಆಶೀರ್ವಾದವನ್ನು ಹೊಂದು. ಈ ವರೆಗೆ ಆಗಿ ಹೋದ ಇನ್ನು ಆಗಲಿರುವ ಭೂಪತಿಗಳಲ್ಲಿ ಶ್ರೇಷ್ಠತಮನೆಂಬ ಗೌರವದ ಹೆಸರನ್ನು ಹೊಂದು. ಕೀರ್ತಿಶಾಲಿಯಾಗು.

ವೃತ್ರಾಸುರ:—ಪೌಲೋಮಿ, ಈ ವಿಷಯದಲ್ಲಿ ವಾದ-ವಿವಾದ ಬೆಳಿಸುವದು ನಿರರ್ಥಕವಾದ್ದು! ದೇವತೆಗಳು ಅಸುರರ ಚಿರವೈರಿಗಳು. ಈ ಎರಡು ಜನಾಂಗಗಳಲ್ಲಿ ಹಿಂದೆ ಎಷ್ಟೋ ಯುದ್ಧಗಳಾಗಿ ಹೋಗಿವೆ. ಈಗ ಆಗುತ್ತಿವೆ. ಮುಂದೆಯೂ ನಡೆಯುವವು. ಯಾರು ಶ್ರೇಷ್ಠರು? ಯಾರು ಕನಿಷ್ಠರು? ಎಂಬುದರ ನಿರ್ಣಯವು ವಾದ-ವಿವಾದದಿಂದಾಗಶಕ್ಯದ್ದಿರದೆ, ಬಾಹುಬಲದಿಂದಾಗಬೇಕಿದೆ! ಇರಲಿ. ಈ ವಿಷಯದಲ್ಲಿ ನಾನು

ಇನ್ನು ನಿನ್ನೊಡನೆ ಮಾತು ಬೆಳೆಸಲಿಚ್ಛಿಸುವದಿಲ್ಲ. ಅಸುರ ಸಾಮ್ರಾಟನ ಸುತೆಯಾದ ನೀನು ಇಂದು ನನ್ನ ಮನೆಗೆ ಬಂದಿರುವೆ. ನಿನ್ನ ಚರಣ ರಜದಿಂದ ನನ್ನ ಈ ಮನೆಯನ್ನು ಪವಿತ್ರಗೊಳಿಸಿರುವೆ. ಈ ಪ್ರಸಂಗದಲ್ಲಿ ನಾನು ನಿನ್ನ ಆದರ-ಸತ್ಕಾರಗಳನ್ನು ಯೋಗ್ಯತೆಗೆ ತಕ್ಕಂತೆ ಮಾಡುವದು ಅವಶ್ಯವಾದ್ದು. ಇಗೋ, ಇಲ್ಲಿ ಸುರೆಯಿದೆ ಸ್ವೀಕರಿಸು (ಪಾನಪಾತ್ರೆಯಲ್ಲಿ ಮದಿರೆಯನ್ನು ಹಾಕಿ ಕೊಡಹೋಗುವನು.)

ಶಚಿ:— ಒಲ್ಲೆನು! ಸೆರೆಗುಡಿಯುಲಿಕ್ಕೆಂದು ನಾನಿಲ್ಲಿಗೆ ಬಂದವಳಲ್ಲ!

ವೃತ್ರಾಸುರ:— ಉತ್ತಮವಾದ ಸುರೆ. ಇದೇ ಈಗ ತಯಾರಿಸಲ್ಪಟ್ಟಿದೆ. ಬಳ್ಳೇ ರುಚಿಕರವಾಗಿದೆ............

ಶಚಿ:— ಹೇಗಿದ್ದರೂ ನಾನೊಲ್ಲೆ! ನಾನೆಂದೂ ಸೆರೆಗುಡಿದವಳಲ್ಲ!

ವೃತ್ರಾಸುರ:— ನಿಜವೆ? ಅಸುರ ನಂದಿನಿಯಾಗಿಯೂ ಮದಿರೆಯನ್ನು ಹೀಯಾಳಿಸುವೆಯಾ? ಸುರೆಯನ್ನು ತಿರಸ್ಕರಿಸುವದು ದಾನವರಿಗೆ ಧರ್ಮಬಾಹ್ಯ ಕೆಲಸವಲ್ಲವೇನು?

ಶಚಿ:— ಅಸುರ ರಾಜನೆ, ನೀನು ನಿನ್ನ ಈ ಮಾತುಗಳಿಂದ ನನ್ನ ಅಪಮಾನ ಮಾಡುತ್ತಿರುವೆ!

ವೃತ್ರಾಸುರ:— ಹೀಗೊ, ಆಗಲಿ! (ದಾಸಿಯನ್ನು ಕೂಗುವನು. ಸೋಮರಸವನ್ನು ತರುವಂತೆ ಆಜ್ಞಾಪಿಸುವನು. ದಾಸಿಯು ಸೋಮರಸವನ್ನು ತರುವಳು) ಈ ಪಾತ್ರೆಯು ಬೇಡ. ಅದೊ, ಅಲ್ಲಿ ಪಾನಪಾತ್ರೆಯಿದೆ. ಅದರಲ್ಲಿ ಸೋಮರಸವನ್ನು ಹಾಕಿ ಇವಳಿಗೆ ಕೊಡು. (ದಾಸಿಯು ಹೀಗೆ ಮಾಡುವಳು.)

ಶಚಿ:— (ಕೋಪದಿಂದ) ದೈತ್ಯರಾಜನೆ, ನಾನು ಸುರೆಯನ್ನು ಸೇವಿಸುವದಿಲ್ಲೆಂದು ಆಗಲೆ ಹೇಳಲಿಲ್ಲವೆ?

ವೃತ್ರಾಸುರ:— ಇದು ಸುರೆಯಲ್ಲ.

ಶಚಿ:— ಮತ್ತೇನು?

ವೃತ್ರಾಸುರ:— ಸೋಮರಸ. ಪರೀಕ್ಷಿಸಿ ನೋಡಿಕೊಳ್ಳು. ಹಾಲಿ

ನಂತೆ ಬೆಳಗಿರುವದನ್ನು ನೋಡಿಕೊಂಡು ಕುಡಿ!

ಶಚಿ:—ಏನಿದ್ದರೂ ನನಗೆ ಬೇಡ! ನನಗೆ ಏನೂ ಬೇಕಿಲ್ಲ!........

ವೃತ್ರಾಸುರ:—ನಾನು ದಾನವನಾಗಿದ್ದರೂ, ದೇವಾಂಗನೆಯರಿಗೆ ಸೋಮರಸವು ಪರಮಪ್ರಿಯಪಾನೀಯವೆಂಬುದನ್ನು ಬಲ್ಲೆನು. ಅಂತೆಯೆ ನಾನು ಸುರೆಯನ್ನು ಹೀಯಾಳಿಸಿದ ನಿನ್ನನ್ನು ಸೋಮರಸದಿಂದ ಸಂತುಷ್ಟಗೊಳಿಸಲಿಕ್ಕೆ ಯತ್ನಿಸುತ್ತಿರುವೆನು. ನೀನಿದನ್ನೂ ಸ್ವೀಕರಿಸಲೊಲ್ಲೆಯಾ? ಪೌಲೋಮಿ, ನೀನೀಗ ದೇವಿಯಲ್ಲವೆ? ಅಲ್ಲವೆಂದು ಹೇಳಿದರೆ, ನಾನು ಸೋಮರಸವನ್ನು ಕುಡಿಯಲಿಕ್ಕೆ ಆಗ್ರಹ ಮಾಡುವದಿಲ್ಲ!

ಶಚಿ:—ನಾನು ದೇವಿಯಲ್ಲವೆಂದು ಅನ್ನುವರಾರು? ನಾನು ನಿಜವಾಗಿಯೂ ದೇವಿಯು! (ದಾಸಿಯ ಕೈಯಲ್ಲಿಯ ಪಾತ್ರೆಯನ್ನು ತಕ್ಕೊಳ್ಳುವಳು. ಕುಡಿಯ ಹೋಗುವಳು. ಇಷ್ಟರಲ್ಲಿ ಪಾನಪಾತ್ರೆಯ ವೈಶಿಷ್ಟ್ಯವು ಅವಳ ಕಣ್ಣಿಗೆ ಬೀಳುವದು. ಅವಳು ಕುಡಿಯುವದನ್ನು ತಡೆದು ಪಾನಪಾತ್ರೆಯನ್ನು ನಿರೀಕ್ಷಿಸಹತ್ತುವಳು.)

ವೃತ್ರಾಸುರ:—ಪೌಲೋಮಿ, ಏನ ನೋಡುತ್ತಿರುವೆ?

ಶಚಿ:—ಇದು ದೇವತೆಗಳ ಪಾನಪಾತ್ರೆಯಲ್ಲ. ಬೇರೊಂದು ವಿಧದ್ದಾಗಿದೆ.

ವೃತ್ರಾಸುರ:—ಆದರೇನಾಯಿತು? ನಾನು ನಿನಗಾಗಿಯೆ ಇದನ್ನು ನಿರ್ಮಿಸಿದ್ದೇನೆ. ದೇವತೆಗಳ ಶ್ರೇಷ್ಠ ಸಂಪತ್ತಿಯನ್ನು ಸಂಗ್ರಹಿಸಿ, ಪರಿಶ್ರಮಪೂರ್ವಕವಾಗಿ ನಿರ್ಮಾಣವಾಗಿದೆ. ನನ್ನ ಕಾಣಿಕೆಯೆಂದು ನೀನಿದನ್ನು ಗ್ರಹಿಸು. ಸೋಮರಸವನ್ನು ಪಾನಮಾಡು.

ಶಚಿ:—ಆಗಲಿ (ಸೋಮರಸವನ್ನು ಕುಡಿಯುವಳು.)

ವೃತ್ರಾಸುರ:—(ಸುರೆಯನ್ನು ಸೇವಿಸಿ ಬಳಿಕ) ದೇವತೆಗಳು ಸೋಮರಸವನ್ನು ಕುಡಿಯುವರು. ದಾನವರು ಸುರೆಯನ್ನು ಸೇವಿಸುವರು. ಇವೆರಡರಲ್ಲಿ ಯಾವುದು ಶ್ರೇಷ್ಠವಾದ್ದೆಂಬದನ್ನು ಯಾರೂ ಹೇಳಲಾರರು. ಯಾಕೆಂದರೆ, ದೇವತೆಗಳೆಂದೂ ಸುರೆಯನ್ನು ಪಾನಮಾಡಿದವರಲ್ಲ. ಅಸು

ರರೆಂದೂ ಸೋಮರಸವನ್ನು ಸೇವಿಸಿದವರಲ್ಲ! ಪೌಲೋಮಿ, ನಾನೆಸ್ನು ವದು ನಿಜವಷ್ಟೆ? ಯಾವಳ ನರಗಳಲ್ಲಿ ಅಸುರರ ನೆತ್ತರವು ಹರಿಯುತ್ತಿ ದೆಯೊ ಅವಳು ಎಂದಾದರೂ ಸೋಮರಸವನ್ನು ಮುಟ್ಟುವಳೆ? (ಇಂದ್ರಾ ಣಿಯು ಉತ್ತರ ಕೊಡದಿರುವಳು.) ಸೋಮರಸದಲ್ಲೂ ಮಾದಕತೆಯುಂಟೆಂಬು ದನ್ನು ನಾನಿದುವರೆಗೆ ಕೇಳಿದವನಾಗಿದ್ದೆನು ಇಂದು ಕಣ್ಣುಟ್ಟ ಕಂಡಂ ತಾಯಿತು. ಹೀಗೆ ಮಾದಕದೃಷ್ಟಿಯಿಂದ ನನ್ನನ್ನೇಕೆ ನೋಡುತ್ತಿರುವೆ? ಉತ್ತರವನ್ನೇಕೆ ಕೊಡಲೊಲ್ಲೆ?

ಶಚಿ:—ನಿನ್ನ ಪ್ರಶ್ನೆಯ ಉತ್ತರವನ್ನು ನಾನು ಕೊಡದವಳಾಗಿರು ವೆನು ಒಂದು ವೇಳೆ ನನ್ನ ಪತಿರಾಜನು ಇಲ್ಲಿದ್ದರೆ........

ವೃತ್ರಾಸುರ—ಪೌಲೋಮಿ:, ಇಂದ್ರನು ಇಲ್ಲಿ ಇಲ್ಲದಿರುವದ ಕ್ಕಾಗಿ ನಿನಗೆ ದುಃಖವಾಗುತ್ತಿದೆಯೆ? ನಾನಾದರೊ ಇಂದ್ರನ ಪಲಾ ಯನ ವಾರ್ತೆಯಿಂದ ನಿನಗೆ ಸಂತೋಷವಾಗಿದೆಯೆಂದೆ ಭಾವಿಸಿದ್ದೆನು. ನನ್ನ ಈ ಭಾವನೆಯು ನಿಜವಾಗಿಯೂ ಭ್ರಾಮಕವಾದ್ದೆ? ಏನೇ ಇರಲಿ, ಅವನು ಈ ಸಮಯದಲ್ಲಿ ನನ್ನ ಸೆರೆಯಾಳಾಗಿ ಇಲ್ಲಿದ್ದರೆ ಏನು ಮಾಡು ತ್ತಿದ್ದನು?

ಶಚಿ:—ಉತ್ತರ ಕೊಡುತ್ತಿದ್ದನು! ಆ ಆರ್ಯನು ನಿನ್ನ ಈ ಅನಾ ರ್ಯ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಹೇಳುತ್ತಿದ್ದನು! ಈಗ ಪ್ರಾಣನಾಥನು ಇಲ್ಲಿ ಇಲ್ಲದಿದ್ದ ಬಳಿಕ ಸಹಧರ್ಮಿಣಿಯಾಗಿದ್ದ ನಾನು ಉತ್ತರಗೊಡುವೆನು, ಕೇಳು. ಆರ್ಯರ ವಿವಾಹವು ಪತಿ-ಪತ್ನಿಯರ ಅಪೂರ್ವ ಸಮನ್ವಯವು. ಈ ವಿವಾಹದಲ್ಲಿ ಪತ್ನಿಯ ಧರ್ಮವು ಪತಿಯ ಧರ್ಮದಲ್ಲಿ ಮುಳುಗಿ ಹೋಗುವದು. ಪತ್ನಿಯ ಕುಲಾಚಾರವು ಪತಿಯ ಕುಲಾಚಾರದಲ್ಲಿ ಲುಪ್ತವಾಗುವದು ಪತಿಯ ಅಸ್ತಿತ್ವದಲ್ಲಿ ಸತಿಯ ಅಸ್ತಿತ್ವವು ಆತ್ಮವಿಸರ್ಜನೆ ಮಾಡುವದು. ನಾನು ಅಸುರನಂದಿನಿಯಾಗಿ ದ್ದರೂ, ಆರ್ಯಪತ್ನಿಯು. ಈಗ ನನ್ನ ಧರ್ಮವು ಆರ್ಯಧರ್ಮವು.

ನನ್ನ ಶಿಕ್ಷಣವು ಆರ್ಯರ ಶಿಕ್ಷಣವು. ನನ ದೀಕ್ಷೆಯು ಆರ್ಯರ ದೀಕ್ಷೆಯು. ಅಂತೆಯೆ ನನಗೆ ಇಂದು ಸುರೆಯು ಅಸ್ಪೃಶ್ಯವು. ಸೋಮವು ನನ್ನ *ದೇವತೆಯು. ಸೋಮರಸವೆಲ್ಲಿ? ಮತ್ತಷ್ಟು ಬೇಕು. (ತಳ್ಳಿಕೊಂಡು ಕುಡಿಯುವಳು.)

ವೃತ್ರಾಸುರ:—ಪೌಲೋಮಿ. ಅಲ್ಲ-ಇಂದ್ರಾಣಿ, ನಿನ್ನ ಉತ್ತರವನ್ನು ಕೇಳಿ ಸ್ತಂಭಿತನಾಗಿ ಹೋಗಿರುವೆನು! ............ ಇನ್ನು ನೀನು ಅಸುರ ಕುಲಕ್ಕೆ ಪೂರಾ ಎರವಾದಂತಾಯಿತಷ್ಟೆ? ............ಮೂರ್ಖನು ನಾನು. ಅಂತೆಯೆ ಮತ್ತೆ ಈ ಪ್ರಶ್ನೆ ಮಾಡುತ್ತಿರುವೆನು! ನಿನ್ನ ಉತ್ತರದಲ್ಲಿ ಸಂದಿಗ್ಧತೆಯಿಲ್ಲ. ಸಂಶಯಕ್ಕೆ ಎಡೆಯಿಲ್ಲ. ನಿನ್ನ ಆರ್ಯನು ಇಲ್ಲಿದ್ದರೂ ಅವನು ನಿನ್ನ ಈ ಭಾಷಣಕ್ಕಿಂತ ಉತ್ತಮವಾದ ಭಾಷಣವನ್ನು ಮಾಡಲಿಕ್ಕೆ ಸಮರ್ಥನಾಗುತ್ತಿದ್ದಿಲ್ಲ! ಅವನು ಒಂದೇ ಒಂದು ವಿಷಯದಲ್ಲಿ ಪಟುವಾಗಿದ್ದಾನೆ! ಅದಾವ ವಿಷಯವೆಂದು ಕೇಳುವೆಯಾ? ಅದನ್ನೆ ಹೇಳುವೆನು. ಅವನು ಪಲಾಯನ ಪಟು! ಅಲ್ಲವೆ? ಹಾಃ ಹಾಃ ಹಾಃ (ನಗುವನು.)

ಶಚಿ:—ಆರ್ಯಪುತ್ರನು ಕೇವಲ ಪಲಾಯನ ಕುಶಲನೆ? ಶುಷ್ಣದೈತ್ಯನನ್ನು ವಧಿಸಿದವನಾವನು? ನಮುಚಿ ದಾನವನನ್ನು ಸಂಹರಿಸಿದವನಾವನು? ಶಂಬರಾಸುರನ ತೊಂಬತ್ತೊಂಬತ್ತು ಕೋಟೆಗಳನ್ನು ಧ್ವಂಸ ಮಾಡಿದವನಾರು? ಬಲ್ಲೆಯಾ?

ವೃತ್ರಾಸುರ:—ಬಲ್ಲೆನು! ಅವನು ಇಂದ್ರನೆಂಬುದನ್ನು ನಾನು ಬಲ್ಲೆನು! ಆದರೆ ಅದೇ ಇಂದ್ರನು †ಕೃಷ್ಣಾಸುರನನ್ನು ಕೊಂದು, ಬಳಿಕ ಅವನ ಗರ್ಭಿಣಿಯರಾದ ಹೆಂಡಂದಿರನ್ನೂ ಸಂಹರಿಸಲಿಲ್ಲವೆ? ಇಂತಹ ಇಂದ್ರನು ವೀರವರನಲ್ಲದೆ ಮತ್ತೇನು?

---

* ವೇದದಲ್ಲಿ ಸೋಮವು ದೇವತಾರೂಪದಲ್ಲಿ ಪೂಜನೀಯವಾಗಿದೆ.

† ಈ ಕಥೆಯು ಪ್ರಥಮಮಂಡಲದ ೧೦೧ನೆಯ ಸೂಕ್ತದಲ್ಲಿ ಉಲ್ಲಿಖಿತವಾಗಿದೆ.

ಶಚಿ:—ಆರ್ಯಪುತ್ರನು ವೀರವರನಲ್ಲವೆಂದು ಅನ್ನುವವರಾರು? ನಾನಂತೂ ಒಂದು ಸಲವಲ್ಲ-ನೂರು ಸಾರೆ ಹೇಳುವೆನು. ಆರ್ಯಪುತ್ರನು ವೀರವರನು-ಶ್ರೇಷ್ಠತಮವೀರನು! ಪ್ರಾಣನಾಥನು ಅತ್ಯಾಚಾರಿಗಳನ್ನೂ ಗರ್ವಿತರನ್ನೂ ಸಮೂಲ ನಾಶಗೊಳಿಸಿದ್ದಾನೆ; ಆದರೆ ತಂದೆಯ ಸಮಾನನಾಗಿದ್ದ ವೃದ್ಧ ಅಸುರಸಾಮ್ರಾಟನನ್ನು ಅವನ ಮಗಳ ಆಶೆಯಿಂದ ಹತ್ಯೆ ಮಾಡಿದವನಲ್ಲ ಕಂಡಿಯಾ! ಇಂತಹ ಕಾಪುರುಷೋಚಿತ ಕೊಲೆಯ ಗೌರವವು ನಿನಗೊಬ್ಬನಿಗೆ ಮಾತ್ರ ಸಲ್ಲತಕ್ಕದ್ದಾಗಿದೆ! ಇಂಥ ನೀಚ ಕೆಲಸವನ್ನು ಮತ್ತಾರೂ ಮಾಡತಕ್ಕವರಲ್ಲ! ತಿಳಿಯಿತೆ?

ವೃತ್ರಾಸುರ:—ಅದು ಗೌರವದ ಕೆಲಸವೆ ಇರಲಿ, ಅಗೌರವದ ಕೆಲಸವೆ ಆಗಿರಲಿ, ಈ ಗೌರವಾಗೌರವಗಳನ್ನು ನಿರ್ಣಯಿಸುವ ಅಧಿಕಾರವು ನಿನ್ನದಲ್ಲ. ನನ್ನದೂ ಅಲ್ಲ. ನಾವೀರ್ವರೂ ಈ ಭಾರವನ್ನು ಭವಿಷ್ಯತ್ಕಾಲದ ಇತಿಹಾಸಕಾರರ ತಲೆಯ ಮೇಲೆ ಹೊರಿಸಿಬಿಡೋಣ. ಅಸುರರ ಮನೆಯಲ್ಲಿ ಪೌಲೋಮಿಯೆಂಬ ಹೆಸರಿನ ನೀಲ ಮಾಣಿಕವಿತ್ತು. ಈ ನೀಲಮಾಣಿಕವು ದೇವತೆಗಳ ಕಣ್ಣುಗಳನ್ನು ಕುಕ್ಕಿಸಿ ಬಿಟ್ಟಿತ್ತು. ಈ ನೀಲಮಾಣಿಕವು ಅಸುರಕುಲ ಪ್ರದೀಪವಾಗಿತ್ತು. ಪುಲೋಮನ ರಾಜನು ಅಸುರರ ಮನೆಯನ್ನು ಅಂಧಕಾರಮಯವಾಗಿ ಮಾಡಿ, ಈ ನೀಲ ಮಾಣಿಕವನ್ನು ದೇವತೆಗಳ ಮುಕುಟದಲ್ಲಿ ಸೇರಿಸಬಯಸಿದನು. ಇದರಿಂದ ಅಸುರರು ಕೋಪಗೊಂಡರು. ಅವರ ತೀಕ್ಷ್ಣವಾದ ಆಯುಧವು ಒರೆಯಿಂದ ಹೊರಬಿದ್ದಿತು. ಪುಲೋಮನನನ್ನು ಬಲಿಗೊಂಡಿತು. ಆ ಪುಲೋಮನನು ಪೌಲೋಮಿಯ ಪಿತನು; ಹಾಗು ಕುಲಕಲಂಕನಾದ ಆ ಪುಲೋಮನನ ಹತ್ಯಾಕಾರಿಯು ನಾನು! ಇವರಿಬ್ಬರಲ್ಲಿ ನೀಚರು ಯಾರು? ಹೀನಕಾರ್ಯಪ್ರವೃತ್ತರು ಯಾರು? ಸ್ವಜನಾಂಗದ ಅಹಿತವನ್ನು ತಡೆಯಬೇಕೆಂಬ ಉಚ್ಚ ಉದ್ದೇಶವನ್ನಿಟ್ಟುಕೊಂಡೆ ನಾನೀ ಕೆಲಸವನ್ನು ಮಾಡಿರುವೆನಲ್ಲದೆ ಬೇರಿಲ್ಲ! ಆದರೆ ನೀನು ನನ್ನ ಲಾಲಸೆಯಿಂದ ಈ ಕೆಲಸ

ಮಾಡಿದೆಯೆಂದು ಅನ್ನುತ್ತಿರುವೆಯಲ್ಲವೆ? ಚೆನ್ನಾಗಿ ವಿಚಾರಿಸಿ ನೋಡು. ನಿನ್ನನ್ನು ನನ್ನ ಕಬಳದಿಂದ ಪಾರು ಮಾಡುವದೂ, ಇಂದ್ರನೊಡನೆ ವಿವಾಹ ಮಾಡುವದೂ ದಧೀಚಿಗೆ ಸಾಧ್ಯವಿರಲಿಲ್ಲ! ನಿನ್ನನ್ನು ರಕ್ಷಣೆ ಮಾಡುವದು ಇಂದ್ರನಿಗೆ ಸಾಧ್ಯವಿರಲಿಲ್ಲ! ನಿನ್ನ ಕುಂಕುಮ ತಿಲಕವನ್ನು ಇದು ವರೆಗೆ ಸ್ಥಿರವಾಗಿ ಇರಿಸಿಕೊಳ್ಳುವದು ನಿನಗೆ ಸಾಧ್ಯವಿರಲಿಲ್ಲ! ಇಂದು ನಾನು ನಿನ್ನ ಅಂಗಸ್ಪರ್ಶ ಮಾಡಲು ಬಯಸಿ, ಮುಂದುವರಿದರೆ, ತಡೆಯುವ ಶಕ್ತಿಯು ದೇವತೆಗಳಲ್ಲಿಲ್ಲ! ಋಷಿಗಳಲ್ಲೂ ಇಲ್ಲ! ಈ ವರೆಗೆ ನಿನ್ನನ್ನು ರಕ್ಷಿಸಿದವರಾರೆಂಬುದನ್ನು ಸರಿಯಾಗಿ ವಿಚಾರಿಸಿ ತಿಳಿದುಕೊಳ್ಳು. ನಾವಿದುವರೆಗೆ ಏತಕ್ಕಾಗಿ ನಿನ್ನ, ಹಾಗು ನಿನ್ನ ಪತಿಯ ರಕ್ಷಣೆ ಮಾಡುತ್ತ ಬಂದಿರುವೆವೆಂಬುದನ್ನು ನೀನು ಬಲ್ಲೆಯಾ? (ಸ್ವರವು ಕಂಪಿತವಾಗುವದು) ನಾನು ಒಂದು ಕಾಲದಲ್ಲಿ ನಿನ್ನನ್ನು ಉತ್ಕಟರೀತಿಯಿಂದ ಪ್ರೀತಿಸಿದ್ದೆನು. ಆ ಪ್ರೇಮವು ಅಕ್ಷಯವಾದುದು. ಅನಂತವಾದುದು. ಇಂತಹ ಪ್ರೇಮದ ಬಲದಿಂದಲೆ ನೀವೀರ್ವರು ಇದು ವರೆಗೆ ಜೀವಿಸಿರುವಿರಿ. ಸುರಕ್ಷಿತರಾಗಿರುವಿರಿ. ನೀನು ನನಗೆ ಬೇಕಾಗಿದ್ದೆ. ಈಗಲೂ ಬೇಕಾಗಿರುವೆ........

ಶಚಿ: . ಈಗಲೂ?

ವೃತ್ರಾಸುರ:—ಅಹುದು. ಈಗಲೂ ಬೇಕಿರುವೆ ನನ್ನ ಜೀವನದ ಪ್ರತಿ ಮುಹೂರ್ತದಲ್ಲೂ ನಾನು ನಿನ್ನನ್ನು ಪಡೆಯುವ ಆಕಾಂಕ್ಷೆಯನ್ನಿಟ್ಟುಕೊಂಡಿದ್ದೆನು. ಮರಣ ಪರಿಯಂತರವೂ ಇಟ್ಟುಕೊಂಡಿರುವೆನು. ನಾನೀ ಆಶೆಯನ್ನು ಯಾವಾಗಲೂ ತ್ಯಜಿಸಿದವನಲ್ಲ ತ್ಯಜಿಸ ತಕ್ಕವನಲ್ಲ ಪೌಲೋಮಿ, ನೀನೇಕೆ ಅಸುರ ಕುಲದಲ್ಲಿ ಅವತರಿಸಿದೆ? ನನ್ನಲ್ಲಿ ಶೌರ್ಯವಿದೆ. ಶಕ್ತಿಯಿದೆ. ಸಾಹಸವಿದೆ. ಪ್ರತಿಭೆಯಿದೆ. ನನ್ನ ಯೌವನದಲ್ಲಿ ನಾನು ನಿನ್ನನ್ನು ಪತ್ನೀರೂಪದಿಂದ ಪಡೆಯಲಿಕ್ಕೆ ಯತ್ನಿಸಿದೆನು. ನಿರಾಶನಾದೆನು. ಬಳಿಕ ಸಹೋದರಿಯ ರೂಪದಿಂದ ಹೊಂದಲಿಕ್ಕೆ ಪ್ರಯತ್ನಿಸಿದೆನು; ಆದರೆ ನಿನ್ನಿಂದ ಭ್ರಾತೃಸ್ನೇಹದ

ಬದಲು ದ್ವೇಷಭಾವನೆಯನ್ನು ಹೊಂದಿ ಖತಿಗೊಂಡೆನು. ಹೀಗೆ ನನ್ನ ಹೃದಯಕ್ಕೆ ಬರೆ ಕೊಡುವದಕ್ಕಾಗಿ ನೀನು ದಾನವಕುಲದಲ್ಲೇಕೆ ಜನಿಸಿದೆ? ಮತ್ತೆಲ್ಲಿಯೂ ಸ್ಥಳವಿರಲಿಲ್ಲವೆ? ಒಂದುವೇಳೆ ನಿನಗೆ ಆಗಂತುಕ ಸಂಬಂಧಗಳಿಂದ ನನ್ನನ್ನು ಸಂತುಷ್ಟಗೊಳಿಸುವದು ಸಾಧ್ಯವಿರದಿದ್ದರೆ, ಅಸುರಕುಲದಲ್ಲಿ ಹುಟ್ಟುವದು ಅವಶ್ಯವಾಗಿದ್ದರೆ, ನೀನು ನನ್ನ ಜನನಿಯಾಗಿ ಏಕೆ ಅವತರಿಸಲಿಲ್ಲ?............

ಶಚಿ:—ದೈತ್ಯರಾಜನೆ, ಇಂದಿನ ಈ ಕ್ರಂದನವೂ ಪ್ರಲಾಪ ವಚನಗಳೂ ನಿರರ್ಥಕವಾದವುಗಳು! ಇನ್ನು ಈ ವಚನಗಳಿಂದ ಯಾವ ಉಪಯೋಗವೂ ಆಗದು! ನಾವಿನ್ನು ವ್ಯಕ್ತಿಯ ಹಿತವನ್ನು ಮರೆದು ಸಾರ್ವಜನಿಕ ಹಿತಕ್ಕಾಗಿ ಪ್ರಯತ್ನವನ್ನು ನಡೆಸೋಣ. ದೇವತೆಗಳಿಗೂ ಮಂಗಳವಾಗಲಿ. ದಾನವರಿಗೂ ಮಂಗಳವಾಗಲಿ. ಇದಕ್ಕಾಗಿ ನಾನೊಂದು ವಿಜ್ಞಾಪನೆಯನ್ನು ಮಾಡಿಕೊಳ್ಳುವೆನು; ನೀವದನ್ನು ನಡಿಸು. ನೀನು ಗೆದ್ದುಕೊಂಡಿರುವ ಈ ದೇವರಾಜ್ಯವನ್ನು ದೇವತೆಗಳಿಗೊಪ್ಪಿಸಿ........

ವೃತ್ರಾಸುರ:....ನೀನು ಸೂಚಿಸಿದ ಸಾರ್ವಜನಿಕ ಹಿತವು ನನಗೆ ಬೇಡ. ಏನಾಗುವದೊ ಆಗಲಿ! ನಾನು ಕೊನೆಯ ವರೆಗೆ ನೋಡಿಬಿಡುವೆನು. ಈಗ ನಾವೀಗಲೇ ಭವಿಷ್ಯತ್ಕಾಲದ ಚಿಂತೆಯನ್ನು ನಮ್ಮ ಮನಸ್ಸಿನಿಂದ ಹೊರದೂಡಿ ಬಿಡೋಣ. ನೀನು ಆನಂದದಿಂದ ಸೋಮರಸವನ್ನು ಸೇವಿಸು; ನಾನು ಸಂತೋಷದಿಂದ ಸುರೆಯನ್ನು ಸೇವಿಸುವೆನು.

ಶಚಿ:—ದೈತ್ಯರಾಜನೆ, ಇನ್ನು ನಿನ್ನ ಮರಣವು ದೂರಿಲ್ಲ! ವಿನಾಶಕಾಲಕ್ಕೆ ಅನುರೂಪವಾದ ವಿಪರೀತಬುದ್ಧಿಯು ನಿನಗುಂಟಾಗಿದೆ. ಬೇಡ! ಈ ದಾರಿಯನ್ನು ಬಿಟ್ಟುಕೊಡು; ಆಸನ್ನಮರಣದಿಂದ ಪಾರಾಗು!

ವೃತ್ರಾಸುರ:— ನನಗೆ ಮರಣವೆ? ಆಗಲಿ! (ಗಹಗಹಿಸಿ ನಗುವನು)

ಶಚಿ:... (ವೃತ್ರಾಸುರನ ಬಳಿಯಲ್ಲಿ ಮೊಳಕಾಲೂರಿ ಕುಳಿತು) ದಾನವರಾಜನೆ, ಹಟಕ್ಕೆ ಬೀಳಬೇಡ! ದೇವಭೂಮಿಯನ್ನು ದೇವತೆಗಳಿಗೊಪ್ಪಿಸಿ,

ನಿನ್ನ ರಾಜ್ಯಕ್ಕೆ ಹೊರಟು ಹೋಗು

ವೃತ್ರಾಸುರ:— ಇದು ನನ್ನ ಪರಾಜಯದ ದ್ಯೋತಕವಲ್ಲದೆ ಮತ್ತೇನು? ಈ ವೃತ್ರಾಸುರನಿಗೆ ಪರಾಜಯವು ಬೇಕಿಲ್ಲ. ಇವನಿಗೆ ಬೇಕಾದ್ದು ಜಯ! ಕೇವಲ ಜಯವಲ್ಲ ಜಯದ ಮೇಲೆ ಜಯ!! ಚಿರಜಯ!!! ನೀನು ಮರಣದ ಭಯದೋರಿ ಯುದ್ಧಪ್ರವೃತ್ತಿಯಿಂದ ನನ್ನನ್ನು ತಡೆಯಬೇಕೆಂದಿರುವೆಯಲ್ಲವೆ? ಆದರೆ ನಾನು ಮರಣಕ್ಕೆ ಹೆದರುವವನಲ್ಲ! ಯುದ್ಧ ಮಾಡುವದನ್ನು ಬಿಟ್ಟುಕೊಡತಕ್ಕವನಲ್ಲ. ಮತ್ತೊಂದು ಮಾತೆಂದರೆ, ಈ ವೃತ್ರಾಸುರನಿಗೆ ಮರಣವೆಂಬುದಿಲ್ಲ. ಯಾಕೆಂದರೆ, ಇವನು ತನ್ನ ಮೃತ್ಯುಬಾಣವನ್ನು ಸ್ವಾಧೀನಪಡಿಸಿಕೊಂಡಿದ್ದಾನೆ. ನೀನದನ್ನು ನೋಡಬಯಸುತ್ತಿದ್ದರೆ ನಾನು ತೋರುವೆನು. ಪಿಶ್ರು, (ಸೇವಕನು ಬರುವನು.) ಆ ಗಂಟನ್ನು ತಂದು ಕೊಡು. (ಹೋಗುವನು. ತಂದು ಕೊಡುವನು.) ಇಗೋ, ಇಲ್ಲಿ ನೋಡು. (ಗಂಟು ಬಿಚ್ಚಿ ತೋರಿಸುವನು.)

ಶಚಿ:—ಅಂದು ನೀನು ಈ ಅಸ್ಥಿಗಳನ್ನು ಕಳುವು ಮಾಡಿ ತಂದಿರುವೆಯಲ್ಲವೆ?

ವೃತ್ರಾಸುರ:—ಕಳವಲ್ಲ. ಆತ್ಮರಕ್ಷಣೆಯ ಪ್ರಯತ್ನವೆಂದೆನ್ನು.

ಶಚಿ:—ದಾನವ ರಾಜನೆ, ಇವು ನಿಜವಾಗಿಯೂ ದಧೀಚಿ ಋಷಿಗಳ ಅಸ್ಥಿಗಳೆ?

ವೃತ್ರಾಸುರ:—ಅಹುದು.

ಶಚಿ:—ಇವುಗಳಲ್ಲಿ ಕಪಾಲವಿಲ್ಲವಲ್ಲ.

ವೃತ್ರಾಸುರ:—ಕಪಾಲವೆಂದರೆ? ತಲೆಬುರುಡೆಯೆ?

ಶಚಿ:—ಹೌದು.

ವೃತ್ರಾಸುರ:—ಇದೆ; ಆದರೆ ಗುಪ್ತವಾಗಿದೆ.

ಶಚಿ:—ಎಲ್ಲಿರುವದು? ಅದನ್ನು ನನಗೆ ಕೊಡು. ನಾನದನ್ನು

ಪೂಜಿಸುವೆನು. ದಧೀಚಿಋಷಿಗಳು ನನ್ನ ಗುರುಗಳು, ಅಭಿಭಾವಕರು, ತಂದೆಗಳು. ನಾನವರಿಂದ ಶಿಕ್ಷಣವನ್ನು ಪಡೆದಿದ್ದೇನೆ. ದೀಕ್ಷೆಯನ್ನು ಹೊಂದಿದ್ದೇನೆ ಒಳೆದು ದೊಡ್ಡವಳಾಗಿದ್ದೇನೆ. ನಾನು ದಾನವ ದುಹಿತೆ ಯಾಗಿದ್ದರೂ ಅವರು ನನ್ನನ್ನು ತಮ್ಮ ಮಗಳಂತೆ ಲಾಲಿಸಿದರು, ಪಾಲಿಸಿದರು, ಪ್ರೀತಿಸಿದರು. ನಾನವರ ವಿಷಯದಲ್ಲಿ ಭಕ್ತಿಯನ್ನು ಪ್ರಕಟಿಸುವದು ನನ್ನ ಕರ್ತವ್ಯವಲ್ಲವೆ? ನೀನವರ ತಲೆಬುರುಡೆಯನ್ನು ನನಗೆ ದಯಪಾಲಿಸು.

ವೃತ್ರಾಸುರ:—ಪೌಲೋಮಿ, ತುಸ ತಡೆ, ಕೊಡುವೆನು. ಅವಸರ ಮಾಡಬೇಡ.

ಶಚಿ:—ದಧೀಚಿ ಋಷಿಗಳು ಒಳ್ಳೆ ಸೌಮ್ಯ ಮುಖಮುದ್ರೆಯವರು. ಶಾಂತಪ್ರಕೃತಿಯವರು. ಅವರು ಅಂದು ದೇವತೆಗಳ ಜೀವನರಕ್ಷಣೆಗಾಗಿ ನೀರಿನಲ್ಲಿ ಮುಳುಗಿ ಆತ್ಮಯಜ್ಞ ಮಾಡಿದರಷ್ಟೆ? ಆಗವರ ಮುಖದಲ್ಲಿ ಮಂದಹಾಸವು ಮಿನುಗುತಲಿತ್ತು. ಆ ಮುಖಚರ್ಯೆಯು ಈಗಲೂ ನನ್ನ ಕಣ್ಣಮುಂದೆ ಕಟ್ಟಿದಂತಿದೆ. ನೀನು ನನಗೆ ಅವರ ತಲೆ ಬುರುಡೆಯನ್ನು ಕೊಟ್ಟರೆ ನಾನದನ್ನು ದಿನಾಲು ಪೂಜಿಸಬೇಕೆಂದಿರುವೆನು.

ವೃತ್ರಾಸುರ:—ನಿನ್ನ ಇಷ್ಟವಿರುವಂತೆ ಮಾಡಿಕೊಳ್ಳು. ನಾನು ಬೇಡೆನ್ನುವದಿಲ್ಲ. ಮೊದಲು ಸೋಮರಸವನ್ನು ಕುಡಿದು ಶಾಂತಳಾಗು. ಬಳಿಕ ನಾನು ನಿನಗೆ ಆ ತಲೆಬುರುಡೆಯನ್ನು ಕೊಡುವೆನು.

(ದಾಸಿಗೆ ಸಂಕೇತ ಮಾಡುವನು ದಾಸಿಯು ಪಾನಪಾತ್ರವನ್ನು ತುಂಬಿಕೊಡುವಳು.)

ಶಚಿ:—(ಸೋಮರಸ ಪಾನಮಾಡಿ) ಎಲ್ಲಿ? ಇನ್ನು ತಲೆಬುರುಡೆಯನ್ನು ತೋರಿಸು.

ವೃತ್ರಾಸುರ:—(ಅಸ್ಥಿಗಳನ್ನು ತೋರಿಸಿ) ಇವು ಕಾಲ ಅಸ್ಥಿಗಳು. ಇವು ಹೊಟ್ಟೆಯೊಳಗಿನ ಅಸ್ಥಿಗಳು. ಇವು ಬಲಗೈಯ ಅಸ್ಥಿಗಳು. ಇವು ಎಡಗೈಯ ಎಲುವುಗಳು. ಪೂರ್ಣವಾಗಿಲ್ಲವಲ್ಲ! ಒಂದು ಭಾಗವು ಎಲ್ಲಿ

ಹೋಯಿತೆನ್ನಬೇಕು? (ಚಮಕಿತನಾಗುವನು.)

ಶಚಿ:—ವಾಮಹಸ್ತದ ಅಸ್ಥಿಭಾಗವು ಎಲ್ಲಿದೆಯೆಂಬುದನ್ನು ನಾನು ಬಲ್ಲೆನು! ಆದರೆ ತಲೆಬುರುಡೆ ಎಲ್ಲಿದೆ?

ವೃತ್ರಾಸುರ:—ಎಡಗೈಯ ಎಲುವಿನ ತುಂಡು ಎಲ್ಲಿದೆಯೆಂಬುದು ನಿನಗೆ ಗೊತ್ತಿದೆಯೆ? ಹೇಳು, ಬೇಗ ಹೇಳು! ಎಲ್ಲಿದೆ? ಅವಶ್ಯವಾಗಿ ನಾನದರ ಶೋಧ ಮಾಡಲೇಬೇಕು!

ಶಚಿ:—ನನಗೆ ಬೇಕಾದ್ದು ತಲೆಬುರುಡೆ ಅದೆಲ್ಲಿದೆ ಹೇಳು. ಬಳಿಕ ನಾನು ಎಡಗೈಯ ಎಲುವಿನ ಸುದ್ದಿಯನ್ನು ಹೇಳುವೆನು

ವೃತ್ರಾಸುರ:—(ಸೋಮರಸ ಪಾನಪಾತ್ರೆಯನ್ನು ತಕ್ಕೊಳ್ಳುವನು. ಮೇಲಿನ ಬೆಳ್ಳಿಯ ತಗಡಿನ ಆವರಣವನ್ನು ತೆಗೆದೊಗೆಯುವನು) ಇಗೋ, ಇಲ್ಲಿದೆ ನೋಡು!

ಶಚಿ:—ದಸ್ಯು! ರಾಕ್ಷಸ!........ನನ್ನ ಪರಮ ಪೂಜ್ಯ ಪಾಲಕ ಪಿತನ ತಲೆಗೆ ಇಂಥ ಅಪಮಾನ ಮಾಡಿದೆಯಾ? ನಾನಿದನ್ನು ಸಹಿಸಲಾರೆನು!

ವೃತ್ರಾಸುರ:—ಇಂದ್ರಾಣಿ, ಅಸುರನಂದಿನಿಯು ಸೋಮರಸವನ್ನು ಕುಡಿಯ ಬಯಸಿದಾಗ, ಅವಳು ಅದನ್ನು ತನ್ನ ತಂದೆಯ ತಲೆಬುರುಡೆಯ ಪಾತ್ರೆಯಲ್ಲಿ ಹಾಕಿಕೊಂಡು ಕುಡಿಯುವದು ಉಚಿತವಾದ್ದಲ್ಲವೆ? (ನಗುವನು)

ಶಚಿ:—ಅಯ್ಯೋ, ಘಾತವಾಯಿತು! ಮೋಸಹೋದೆನು! ಪೂಜ್ಯ ಪಿತನೆ, ತ್ಯಾಗಿವರ್ಯನೆ, ನನ್ನ ಈ ಅಜ್ಞಾನಕೃತ ಅಪರಾಧವನ್ನು ಕ್ಷಮಿಸು! (ಬೀಳುವಳು.)

ವೃತ್ರಾಸುರ:—ಪಿಪ್ರು, ಈ ಅಸ್ಥಿಯ ಗಂಟಿನಲ್ಲಿ ಎಡಗೈಯ ಒಂದು ಎಲುವು ಇಲ್ಲದಾಗಿದೆ. ಎಲ್ಲಿ ಹೋಗಿರಬಹುದು? ಯಾರು ಒಯ್ದಿರಬಹುದು? ಈಗಿಂದಿಗಳೇ ಶೋಧ ಮಾಡುವದು ಅತ್ಯವಶ್ಯ

ವಾಗಿದೆ. ಹೋಗು. ಬೇಗನೆ ಹುಡುಕಿಕೊಂಡು ಬಾ. ಅದು ದೊರೆತ ಹೊರತು ನನಗೆ ಸಮಾಧಾನವಾಗದು!

ಶಚಿ:—(ಎದ್ದು ಕುಳಿತು) ಅವನಿಗೇಕೆ ನಿರರ್ಥಕ ತೊಂದರೆ ಕೊಡುವೆ? ಅದು ಎಲ್ಲಿದೆಯೆಂಬುದನ್ನು ನಾನು ಬಲ್ಲೆನು. ಹೇಳುವೆನು.

ವೃತ್ರಾಸುರ:—ಬೇಗ ಹೇಳು! ವಿಲಂಬವನ್ನು ನಾನು ಸಹಿಸಲಾರ ದವನಾಗಿರುವೆನು!

(ಆಕಾಶದಲ್ಲಿ ಮೇಘಗರ್ಜನೆಯಾಗುವದು.)

ಶಚಿ:—(ಆಲೋಚಿಸಿ) ನಾನು ಹೇಳುವದಿಲ್ಲ!.......

ವೃತ್ರಾಸುರ:—ಹೇಳಲೇಬೇಕು. ಹೇಳುವದಿಲ್ಲವೆಂದರೆ ಸುಮ್ಮ ನಿರತಕ್ಕವನು ನಾನಲ್ಲ! ಹೇಳು! ಬೇಗ ಹೇಳು! (ಶಚಿಯು ಒಂದು ಕೈಯ ನ್ನು ಗಟ್ಟಿಯಾಗಿ ಹಿಡಿಯುವನು.)

ಶಚಿ:—ಪ್ರಾಣನಾಥ, ಪ್ರಿಯತಮ, ದೇವರಾಜ, ಈಗ ನೀನೆಲ್ಲಿ? ಈ ದುಷ್ಟ ದಾನವನು ನಡಿಸಿದ್ದ ಮಹಾತ್ಮ ದಧೀಚಿ ಋಷಿಗಳ ಅವ ಮಾನವನ್ನು ನೋಡು. ನಡಿಸಿರುವ ಇಂದ್ರಾಣಿಯ ಅಪಮಾನವನ್ನು ನೋಡು. ಪ್ರತೀಕಾರಕ್ಕೋಸುಗ ಧಾವಿಸಿ ಬಾ!

ವೃತ್ರಾಸುರ:—(ಹುಚ್ಚನಂತೆ) ಎಡಗೈಯ ಅಸ್ಥಿಯೆಲ್ಲಿ? ಎಲ್ಲಿರು ವದು ತೋರಿಸಿಕೊಡು! (ವಜ್ರಾಯುಧವನ್ನು ಧರಿಸಿದ್ದ ಇಂದ್ರನು ಬರುವನು.) ಹೂ....ಬೇಗ ಹೇಳು....ದಧೀಚಿ ಋಷಿಯ ಎಡಗೈಯ ಅಸ್ಥಿ ಭಾಗವೆಲ್ಲಿ?

ಇಂದ್ರ:—ನನ್ನ ಕೈಯಲ್ಲಿದೆ. ಬೇಕೆ?....

ವೃತ್ರಾಸುರ:—(ಉನ್ಮಾದನಂತೆ) ಬೇಕು! ಅತ್ಯವಶ್ಯವಾಗಿ ಬೇಕು! (ತಿಕ್ಕೊಳ್ಳಹೋಗಿ ಭಯಕಂಪಿತನಾಗಿ ತಿರುಗುವನು) ಬೇಡ....ಬೇಡ....ಬೇಡ!

ಇಂದ್ರ:—ಒಲ್ಲೆನೆಂದರೆ ಬಿಡುವದಿದಲ್ಲ! ಇಗೊ, ಇಲ್ಲಿ ನೋಡು. (ತೋರಿಸುವನು) ಇದರ ಹೆಸರು ವಜ್ರಾಯುಧ. ಅತ್ಯಾಚಾರಿಯು ಬೇಡ ವೆಂದು ಹೇಳಿದರೂ ಈ ವಜ್ರಾಯುಧವು ಸುಮ್ಮನಿರತಕ್ಕದ್ದಲ್ಲ! ತ್ಯಾಗಿ

ವರ್ಯನ ಆತ್ಮಯಜ್ಞದಿಂದ ಲಬ್ಧವಾದ ಅಸ್ಥಿಯಿಂದ ನಿರ್ಮಿತವಾದ ಈ ಅಸ್ತ್ರವು ನಿನ್ನ ವಕ್ಷವನ್ನು ವಿದೀರ್ಣಮಾಡಿ 'ಅತ್ಯಾಚಾರಿಗಳೆ, ಸಾವಧಾನ!' ಎಂದು ಜಗತ್ತಿಗೆ ಸಾರಿ ಹೇಳುವದು.

(ವಜ್ರವನ್ನು ಪ್ರಯೋಗಿಸುವನು. ಅದು ವೃತ್ರಾಸುರನ ಎದೆಯನ್ನು ಸೀಳುವದು. ವೃತ್ರಾಸುರನು ಮರಣಹೊಂದುವನು. ಹಲವರು ದೇವತೆಗಳು ಧಾವಿಸಿ ಬರುವರು. ದೇವರಾಜನ ಹಾಗು ದಧೀಚಿಯ ಜಯ ಜಯಕಾರವನ್ನು ಮಾಡುವರು )






ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಛ. ಕಾಳೆ
ಇವರಿಂದ ಛಾಪಿಸಲ್ಪಟ್ಟಿತು.